

# ವಿವೇಕಪ್ರಭ

ರಾಮಕೃಷ್ಣ ಮಹಾಸಂಘದ ಮಾಸಪತ್ರಿಕೆ

ಜನವರಿ 2000 ರೂ. 7

- ಆಧುನಿಕ ಹಿಂದೂಸಮಾಜ ಮತ್ತು ಹಿಂದೂಧರ್ಮ
- ಅಯಸ್ಕಾಂತೀಯ ಯುವಶಕ್ತಿ
- ದೇವಿಯೊ ಮಾನವಿಯೊ!
- ವೇದಗಳಲ್ಲಿ ಸಮಷ್ಟಿಪ್ರಜ್ಞೆ






ವ್ಯವಸ್ಥಾಪಕ ಸಂಪಾದಕರು
ಸ್ವಾಮಿ ಆತ್ಮವಿದಾನಂದ
ಅಧ್ಯಕ್ಷರು, ಶ್ರೀರಾಮಕೃಷ್ಣ ಆಶ್ರಮ, ಮೈಸೂರು

ಸಂಪಾದಕರು
ಸ್ವಾಮಿ ನಿತ್ಯಸ್ಥಾನಂದ

ಸಂಪಾದಕ ಸಲಹಾ ಮಂಡಲಿ
ಸ್ವಾಮಿ ಹರ್ಷಾನಂದ
ಸ್ವಾಮಿ ಪುರುಷೋತ್ತಮಾನಂದ
ಸ್ವಾಮಿ ರಾಘವೇಶಾನಂದ
ಡಾ. ಪ್ರಭುಶಂಕರ
ಕೆ.ಸಿ. ಶಿವಪ್ಪ
ಕೆ.ಬಿ. ಪ್ರಭುಪ್ರಸಾದ
ನಿರಂಜನ ವಾನಳ್ಳಿ

ಅಕ್ಷರ ಜೋಡಣೆ
ಶ್ರೀರಾಮಕೃಷ್ಣ ಆಶ್ರಮ
ಮೈಸೂರು

ಮುಖಪುಟ ವಿನ್ಯಾಸ
ಟೈಪ್ ಕಾರ್ನರ್, ಬೆಂಗಳೂರು

ಮುದ್ರಣ
ಪಟ್ಟಾಭಿ ಎಂಟರ್‌ಪ್ರೈಸಸ್, ಮೈಸೂರು

ಮುಖಪುಟ ಮುದ್ರಣ
ಮಯೂರ್ ಗ್ರಾಫಿಕ್ಸ್, ಬೆಂಗಳೂರು

ಚಂದಾ ವಿವರ

| | |
|---|---|
| ಬಿಡಿ ಪ್ರತಿ | ರೂ. 7 |
| ವಾರ್ಷಿಕ | ರೂ. 70 |
| ಮೂರು ವರ್ಷ | ರೂ. 180 |
| ಆಜೀವ (25 ವರ್ಷ) | ರೂ. 1500 |
| ಪೋಷಕರು | ರೂ. 3000 ಅಥವಾ ಹೆಚ್ಚು |

ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ :
ಶ್ರೀರಾಮಕೃಷ್ಣ ಆಶ್ರಮ
ವಿವೇಕಪ್ರಭ ವಿಭಾಗ
ಯಾದವಗಿರಿ, ಮೈಸೂರು 570 020
ದೂರವಾಣಿ : 510535
ಫ್ಯಾಕ್ಸ್ : 0821 516000
e-mail : srkvs@bgl.vsnl.net.in

# ವಿವೇಕಪ್ರಭ

ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ

ಸಂಪುಟ ೧ ಜನವರಿ ೨೦೦೦ ಸಂಚಿಕೆ ೧

## ಪ್ರಭಾಕಿರಣ



# India's No. 1 Radial

**No. 1 In Car Radials**
Highest market share for car radials in India (Excluding imports).

**No. 1 In Range**
Steel Radials for every car on Indian roads.

**No. 1 In Exports**
Largest exported brand from India. Only tyre Co. to have "E" mark Certification. Awarded the National Export Award for 1996-97 and Capexil's highest export award for 1997-98.

**No. 1 In Technology**
First to introduce radials in India. First and only T-rated and H-rated Steel Radial - Ultima & Ultima-XS. First dual contact Steel Radial in India - Aquasonic.

**No. 1 In Quality**
First tyre manufacturer in the world to get ISO 9001 for entire operations. Only tyre manufacturer in India and the first in the world to be awarded the QS 9000 for multi-location operations.

**No. 1 In R & D**
India's first and largest in house R & D centre for rubber & allied technology. HASETRI has become the first research institute in Asia to be awarded the international recognition, ISO 9002, ISO/IEC GUIDE 25 & EN 45001.

**No. 1 In Rallies**
JK Tyre is the National Rally Champion in all categories from 1994-1997 (A record in Asia - Pacific)**

**No. 1 In Truck & Bus tyres**
Market share 21% ***.

* Source : Estimated Production figures of Automotive Tyre Manufacturers Association for the year 1998-99 ** Source : Castrol National Rally Championship for cars. *** Including sales of Vikrant brand.

INTERACT VISION 5928




JKTYRE




• Visit us at http://www.jktyre.com



ಉನ್ನತ ಆಲೋಚನೆಗಳಿಂದ, ಅತ್ಯುನ್ನತ ಆದರ್ಶಗಳಿಂದ ನಿಮ್ಮ ಮೆದುಳನ್ನು ತುಂಬಿ ; ಅವುಗಳನ್ನು ಹಗಲಿರುಳೂ ನಿಮ್ಮ ಮುಂದಿರಿಸಿ ಕೊಳ್ಳಿ. ಇದರಿಂದ ಮಹತ್ಕಾರ್ಯ ಉದ್ಭವಿಸುತ್ತದೆ.

ಪ್ರತಿಯೊಬ್ಬರೂ ಇತರರ ಭಾವವನ್ನು ಗ್ರಹಿಸಬೇಕು. ಆದರೂ ತನ್ನ ವೈಯಕ್ತಿಕತೆಯನ್ನು ಉಳಿಸಿ ಕೊಳ್ಳಬೇಕು ಮತ್ತು ತನ್ನ ಬೆಳವಣಿಗೆಯ ನಿಯಮಕ್ಕೆ ಅನುಸಾರವಾಗಿ ಬೆಳೆಯಬೇಕು.

ನೀವು ನಿದ್ರಿಸುತ್ತಿರುವಾಗಲೂ ಕೂಡ ವಿವೇಕದ ಖಡ್ಗವನ್ನು ನಿಮ್ಮ ತಲೆಯ ಪಕ್ಕದಲ್ಲಿ ಇಟ್ಟುಕೊಂಡಿರಿ; ಕನಸಿನಲ್ಲಿಯೂ ಕೂಡ ಪ್ರಾಪಂಚಿಕ ಆಸೆ ನಿಮ್ಮ ಸಮೀಪಕ್ಕೆ ಸುಳಿಯದಿರಲಿ.

ಸ್ವಾಮಿ ವಿವೇಕಾನಂದ

## ಪ್ರಾರ್ಥನೆ

ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತ -
ಸ್ತೌ ಸಂಪರೀತ್ಯ ವಿವಿನಕ್ತಿ ಧೀರಃ |
ಶ್ರೇಯೋ ಹಿ ಧೀರೋಽಭಿಪ್ರೇಯಸೋ ವೃಣೀತೇ
ಪ್ರೇಯೋ ಮಂದೋ ಯೋಗಕ್ಷೇಮಾದ್ವೃಣೀತೇ ||

*ಕಠೋಪನಿಷತ್ ೧.೨.೨*

ಆತ್ಮೋನ್ನತಿಯ ಮಾರ್ಗ (ಶ್ರೇಯಸ್) ಮತ್ತು ಪ್ರಾಪಂಚಿಕ ಸುಖಪ್ರಾಪ್ತಿಯ ಮಾರ್ಗ(ಪ್ರೇಯಸ್) ಇವೆರಡೂ ಮಾನವನ ಮುಂದೆ ತೆರದಿವೆ. ವಿವೇಕ ಬುದ್ಧಿಯುಳ್ಳವನು ಇವೆರಡನ್ನೂ ಚೆನ್ನಾಗಿ ವಿಶ್ಲೇಷಿಸಿ ನೋಡುತ್ತಾನೆ. ಆತ ಪ್ರೇಯಸ್ಸನ್ನು ಬಿಟ್ಟು ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ. ಅವಿವೇಕಿಯಾದವನು ಯೋಗಕ್ಷೇಮಕ್ಕಾಗಿ ಪ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ.

ಯೋ ದೇವಾನಾಂ ಪ್ರಥಮಂ ಪುರಸ್ತಾದ್
ವಿಶ್ವಾಧಿಕೋ ರುದ್ರೋ ಮಹರ್ಷಿಃ |
ಹಿರಣ್ಯಗರ್ಭಂ ಪಶ್ಯತ ಜಾಯಮಾನಂ
ಸ ನೋ ದೇವಃ ಶುಭಯಾ ಸ್ಮೃತ್ಯಾ ಸಂಯುನಕ್ತು ||

*ಮಹಾನಾರಾಯಣೋಪನಿಷತ್ ೧೦.೧೯*

ಸರ್ವಶ್ರೇಷ್ಠನೂ, ವೇದದ ಮೂಲಕ ಪ್ರಕಾಶಿತನಾದವನೂ ಪರಮದ್ರಷ್ಟನೂ ಎಲ್ಲಕ್ಕೂ ಮೊದಲು ಹುಟ್ಟಿದ ಹಿರಣ್ಯಗರ್ಭನನ್ನು ನೋಡುವವನೂ ಆದ ದೇವದೇವನು ನಮ್ಮನ್ನು ಶ್ರೇಯಸ್ಕರವಾದ ಸ್ಮೃತಿಯೊಂದಿಗೆ ಒಂದುಗೂಡಿಸಲಿ.

## ಪತ್ರಿಕೆಯ ಧ್ಯೇಯ

(ರಾಮಕೃಷ್ಣ ಮಹಾಸಂಘದ ವಿವಿಧ ಪತ್ರಿಕೆಗಳ ಸ್ಥಾಪನೆಯ ಸಮಯದಲ್ಲಿ ಸ್ವಾಮೀಜಿಯವರು ನೀಡಿದ ಮಾರ್ಗದರ್ಶನ ಸೂತ್ರ)

ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು. ಅಲ್ಲ, ಇಲ್ಲ ಎಂಬ ನಿಷೇಧಾತ್ಮಕ ಭಾವನೆಗಳು ಮನುಷ್ಯನನ್ನು ನಿರ್ಜೀವ ಮಾಡಿಬಿಡುತ್ತವೆ.... ನಿಂದೆಯ ನುಡಿಗಳಿಗೆ ಅಲ್ಲಿ ಅವಕಾಶವೇ ಇರಕೂಡದು ... ವೇದ ವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು. ಸದಾಚಾರ, ಸದ್ವ್ಯವಹಾರ, ಶಿಕ್ಷಣ ಇವುಗಳನ್ನು ಕುರಿತ ವಿಚಾರಗಳನ್ನು ಜನರಿಗೆ ನೀಡಿ ಕೆಳವರ್ಗದವರೂ ಮೇಲ್ಮಟ್ಟಕ್ಕೆ ಏರುವಂತೆ ಮಾಡಬೇಕು. ಪತ್ರಿಕೆಯಲ್ಲಿ ಇದನ್ನೆಲ್ಲ ಬರೆದು ಯುವಕರು ಮುದುಕರು, ಪುರುಷರು ಮಹಿಳೆಯರು ಎಲ್ಲರನ್ನೂ ಜಾಗ್ರತಗೊಳಿಸಿ.

ಸ್ವಾಮಿ ವಿವೇಕಾನಂದ

## ವಿಶೇಷ ಧನ್ಯವಾದಗಳು

ಹೊಸ ವರ್ಷವು, ಹೊಸ ಶತಮಾನವು, ಹೊಸ ಸಹಸ್ರಮಾನವು ತಮಗೆಲ್ಲರಿಗೂ ಸುಖ ಶಾಂತಿ, ಸಮೃದ್ಧಿಯನ್ನು ನೀಡಲೆಂದು ಹಾರೈಸುತ್ತೇವೆ. ಮೈಸೂರು ಶ್ರೀರಾಮಕೃಷ್ಣ ಆಶ್ರಮವು ೭೫ನೆ ವರ್ಷವನ್ನು ಪ್ರವೇಶಿಸುತ್ತಿರುವ ಶುಭ ಸಂದರ್ಭದಲ್ಲಿ ವಿವೇಕಪ್ರಭ ಮಾಸಪತ್ರಿಕೆಯ ಪ್ರಥಮ ಸಂಚಿಕೆಯನ್ನು ನಿಮ್ಮೆಲ್ಲರ ಮುಂದಿಡಲು ನಾವು ಹರ್ಷಿಸುತ್ತೇವೆ. ಈ ಪತ್ರಿಕೆಯ ಮೂಲಕ ಉದಾತ್ತ ಆಧ್ಯಾತ್ಮಿಕ ಭಾವನೆಗಳು ಕರ್ನಾಟಕದ ಮೂಲೆಮೂಲೆಗೂ ಹರಡಿ ಎಲ್ಲೆಲ್ಲಿಯೂ ನವಚೇತನ ಜಾಗ್ರತವಾಗಲಿ ಎಂದು ನಾವು ಹಾರೈಸುತ್ತೇವೆ. ಈ ದಿವ್ಯ ಕಾರ್ಯದಲ್ಲಿ ಪ್ರೋತ್ಸಾಹ, ಆಶೀರ್ವಾದ ಹಾಗೂ ಧನಸಹಾಯವನ್ನು ಮಾಡಿರುವ ರಾಮಕೃಷ್ಣ ಮಹಾಸಂಘದ ಪರಮಾಧ್ಯಕ್ಷರಾದ ಪೂಜನೀಯ ಸ್ವಾಮಿ ರಂಗನಾಥಾನಂದಜಿ ಮಹಾರಾಜ್ ಅವರಿಗೆ ನಮ್ಮ ಅತ್ಯಂತ ಕೃತಜ್ಞತಾಪೂರ್ವಕ ಪ್ರಣಾಮಗಳು. ಹಾಗೆಯೇ ಈ ಕಾರ್ಯದಲ್ಲಿ ವಿವಿಧ ರೂಪಗಳಲ್ಲಿ ಸಹಾಯ ನೀಡಿರುವ ಇತರ ಎಲ್ಲ ಸಂನ್ಯಾಸಿ ಸಹೋದರರಿಗೂ, ಮಹನೀಯರಿಗೂ ಮತ್ತು ಮಹಿಳೆಯರಿಗೂ ನಮ್ಮ ಹೃತ್ಪೂರ್ವಕ ಧನ್ಯವಾದಗಳು. ಈ ಪತ್ರಿಕೆಯನ್ನು ಜನಪ್ರಿಯವನ್ನಾಗಿ ಮಾಡುವ ಕಾರ್ಯದಲ್ಲಿ ಎಲ್ಲರ ಸಹಕಾರವನ್ನು ಕೋರುತ್ತೇವೆ.

ಸ್ವಾಮಿ ಆತ್ಮವಿದಾನಂದ
ವ್ಯವಸ್ಥಾಪಕ ಸಂಪಾದಕ

### ವಿವೇಕಪ್ರಭ ಪತ್ರಿಕೆಯ ಪೋಷಕರು

| | |
|---|---|
| ೦೧. ಪೂಜನೀಯ ಸ್ವಾಮಿ ರಂಗನಾಥಾನಂದಜಿ ಮಹಾರಾಜ್ | ..ಬೇಲೂರು ಮಠ |
| ೦೨. ಶ್ರೀಮತ್ ಸ್ವಾಮಿ ಮುಖ್ಯಾನಂದಜಿ ಮಹಾರಾಜ್ | ..ಬೇಲೂರು ಮಠ |
| ೦೩. ಶ್ರೀಮತ್ ಸ್ವಾಮಿ ಪ್ರಬುದ್ಧಾನಂದಜಿ ಮಹಾರಾಜ್ | ..ಅಮೇರಿಕಾ |
| ೦೪. ಶ್ರೀಮತ್ ಸ್ವಾಮಿ ದಯಾತ್ಮಾನಂದಜಿ ಮಹಾರಾಜ್ | ..ಲಂಡನ್ |
| ೦೫. ಶ್ರೀಮತ್ ಸ್ವಾಮಿ ವೀತಮೋಹಾನಂದಜೀ ಮಹಾರಾಜ್ | ..ಫ್ರಾನ್ಸ್ |
| ೦೬. ಶ್ರೀ ರಾಧಾಕೃಷ್ಣ, | ..ಅಮೇರಿಕಾ |
| ೦೭. ಶ್ರೀ ರಾಮೇಶ್ವರ ತಾಂತಿಯಾ ಮೆಮೋರಿಯಲ್ ಟ್ರಸ್ಟ್ | ..ಕಲ್ಕತ್ತಾ |
| ೦೮. ಭಾರತ್ ಸೇವಾ ಪ್ರತಿಷ್ಠಾನ | ..ಕಲ್ಕತ್ತಾ |
| ೦೯. ಕರ್ನಲ್ ವಿ. ರಾಜು | ..ಮೈಸೂರು |
| ೧೦. ಶ್ರೀ ಮಹೇಂದ್ರಪಾಲ್ ಬಾಹುಲ್ | ..ಮುಂಬೈ |
| ೧೧. ಡಾ. ಹರಿಹರ್‌ದಾಸ್ | ..ರಾಂಚಿ |
| ೧೨. ಶ್ರೀ ರವೀಂದ್ರ ಎಸ್. ಸಿ. | ..ಬೆಂಗಳೂರು. |
| ೧೩. ದಿ. ಶ್ರೀ ಮಲ್ಲರಾಜ್ ಅರಸ್. | ..ಮೈಸೂರು. |
| ೧೪. ಡಾ.ಹೆಚ್. ಎ. ನಾರಾಯಣ್ | ..ಬೆಂಗಳೂರು |
| ೧೫. ಶ್ರೀಮತಿ ಸಾವಿತ್ರಿ | ..ಮಂಗಳೂರು |
| ೧೬. ಶ್ರೀರಾಮ್ ಫೌಂಡೇಷನ್ ಟ್ರಸ್ಟ್ | ..ಬೆಂಗಳೂರು |
| ೧೭. ಶ್ರೀಮತಿ ಮಥುರಾ ಕಿಣಿ. | ..ಮೈಸೂರು |
| ೧೮. ಶ್ರೀಮತಿ ಉಮಾ ಪಿ. ನಾಯಕ್ | ..ಮೈಸೂರು |
| ೧೯. ಶ್ರೀ ದೀಪಕ್ ರಂಜನ್ ಗುಹ. | ..ಗೌಹಾಟಿ |
| ೨೦. ಶ್ರೀಮತಿ ಗಂಗಮ್ಮ ಪೂವಯ್ಯ | ..ಕೊಡಗು |

.....ಮುಂದುವರೆಯುವುದು

### ಆಹ್ವಾನ

ನೀವೂ ಚಂದಾದಾರರಾಗಿ. ನಿಮ್ಮ ಮಿತ್ರರೂ ಚಂದಾದಾರರಾಗುವಂತೆ ಪ್ರೇರೇಪಿಸಿ. ಅಥವಾ ನಿಮ್ಮ ಮಿತ್ರರಿಗೆ 'ವಿವೇಕಪ್ರಭ'ವನ್ನು ಕೊಡುಗೆಯಾಗಿ ಕೊಡಿ.ಆ ಮಿತ್ರರಿಗೆ ನಿಮ್ಮ ಹೆಸರಿನಲ್ಲಿ ಒಂದು ಗ್ರೀಟಿಂಗ್ ಕಾರ್ಡ್ ಕಳುಹಿಸಲಾಗುವುದು.ಚಂದಾವನ್ನು ಯಾವ ತಿಂಗಳಿನಿಂದ ಬೇಕಾದರೂ ನೋಂದಾಯಿಸಿಕೊಳ್ಳಬಹುದು.

### ವಿಶೇಷ ರಿಯಾಯಿತಿ

ಪೋಷಕರು ಮತ್ತು ಆಜೀವ ಚಂದಾದಾರರು ನಮ್ಮ ಆಶ್ರಮದಿಂದ ಪ್ರಕಟವಾದ ಗ್ರಂಥಗಳನ್ನು ನಮ್ಮ ಆಶ್ರಮದ ಮೂಲಕ ಕೊಳ್ಳುವಾಗ ಅವರಿಗೆ ಶೇಕಡಾ ೨೦% ರಿಯಾಯಿತಿ ಕೊಡಲಾಗುವುದು.

ಪೋಷಕರ ಅಥವಾ ಯಾರ ಹೆಸರಿನಲ್ಲಿ ಸಹಾಯಧನ ನೀಡಲಾಗುವುದೊ,ಅವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುತ್ತದೆ ಮತ್ತು ಪತ್ರಿಕೆಯನ್ನು ಆಜೀವ ಕಳುಹಿಸಲಾಗುವುದು. ರಾಮಕೃಷ್ಣ ಆಶ್ರಮಕ್ಕೆ ನೀಡಿದ ಪೋಷಕ ಸಹಾಯಧನಕ್ಕೆ ಕಾಯಿದೆ 80 G ಅನ್ವಯ ಆದಾಯ ತೆರಿಗೆ ರಿಯಾಯಿತಿ ಇರುತ್ತದೆ.

### ಚಂದಾದಾರರಿಗೆ ಸೂಚನೆ

೧.ನಿಮ್ಮ ಚಂದಾ ಸಂಖ್ಯೆಯನ್ನು ಪತ್ರಿಕೆಯ ಮೇಲಿರುವ ನಿಮ್ಮ ಅಂಚೆ ವಿಳಾಸದ ಲೇಬಲ್‌ನ ಎಡಭಾಗದಲ್ಲಿ ನಮೂದಿಸಲಾಗಿದೆ. ೨. ಹಾಗೆಯೇ ನಿಮ್ಮ ಚಂದಾ ಅವಧಿಯ ಕೊನೆಯ ತಿಂಗಳು ಮತ್ತು ವರ್ಷವನ್ನು ಆ ಲೇಬಲ್‌ನ ಬಲ ಭಾಗದಲ್ಲಿ ನಮೂದಿಸಲಾಗಿದೆ. ೩. ಪತ್ರಿಕೆಯನ್ನು ನಿಮಗೆ ನಿರಂತರವಾಗಿ ತಲುಪಿಸಲು ಅನುಕೂಲವಾಗುವಂತೆ ನಿಮ್ಮ ಚಂದಾವನ್ನು ಅವಧಿ ತೀರುವ ೧ ತಿಂಗಳು ಮುನ್ನವೇ ನವೀಕರಿಸಿ. ೪. ಸಾಧಾರಣವಾಗಿ ಪತ್ರಿಕೆಯು ತಿಂಗಳಿನ ಮೊದಲ ವಾರದಲ್ಲಿ ನಿಮ್ಮ ಕೈ ಸೇರುವುದು. ತಿಂಗಳಿನ ಕೊನೆಯ ವಾರದಲ್ಲೂ ನಿಮಗೆ ಪತ್ರಿಕೆ ತಲುಪದಿದ್ದಲ್ಲಿ ನಮ್ಮ ಕಾರ್ಯಾಲಯಕ್ಕೆ ತಿಳಿಸಿ. ೨ ತಿಂಗಳ ನಂತರ ಈ ಬಗ್ಗೆ ಬರುವ ದೂರುಗಳನ್ನು ಗಮನಿಸಲಾಗುವುದಿಲ್ಲ. ೫. ದಯವಿಟ್ಟು ನಿಮ್ಮ ಎಲ್ಲ ಪತ್ರವ್ಯವಹಾರದಲ್ಲಿಯೂ ನಿಮ್ಮ ಚಂದಾ ಸಂಖ್ಯೆಯನ್ನು ಹಾಗೂ ನಿಮ್ಮ ಸಂಪೂರ್ಣ ವಿಳಾಸವನ್ನು ತಪ್ಪದೆ ತಿಳಿಸಿ. ೬. ವಿಳಾಸ ಬದಲಾಗಿದ್ದಲ್ಲಿ ನಮ್ಮ ಕಾರ್ಯಾಲಯಕ್ಕೆ ತಿಳಿಸಿ.



ರಾಮಕೃಷ್ಣ ಮಹಾಸಂಘದ ಅಧ್ಯಕ್ಷರಾದ
ಪರಮಪೂಜ್ಯ ಸ್ವಾಮಿ ರಂಗನಾಥಾನಂದಜಿ ಮಹಾರಾಜ್ ಅವರ



# ಆಶೀರ್ವಚನ

### *MESSAGE*

*I am glad to know that the Ramakrishna Ashrama, Mysore, is starting a monthly journal in Kannada by name* **Viveka Prabha.** *I have been striving for more than two decades to have such a journal in Kannada language. Similar journals are there in Tamil, Telugu, Malayalam, Bengali, Hindi and English. The Tamil journal,* **Ramakrishna Vijayam**, *has nearly 90,000 subscribers. Why not this Kannada journal have such a large number of subscribers?*

*Swami Vivekananda loved Karnataka. He spent several days there, met the Maharaja of Mysore and also distinguished people, and had a great hope that Mysore (now Karnataka) would be a progressive state.*

*This* **Viveka Prabha** *will be an instrument for spreading among the people man-making and nation building ideas. Our people have learnt much, but they have so much more to learn to become a modern progressive nation.*

*I hope this journal will receive whole-hearted co-operation from the writers and scholars, and the general public.*

*I convey my love and blessings to* **Viveka Prabha** *for the widespread diffusion of Ramakrishna-Vivekanada and Vedantic as well as modern scientific ideas among the people.*

Ranganathananda

*(Swami Ranganathananda)*
*President*

**Ramakrishna Math &**
**Ramakrishna Mission**
**P O Belur Math,**
**Dist. Howrah**
**West Bengal: 711 202**

ಮೈಸೂರು ರಾಮಕೃಷ್ಣ ಆಶ್ರಮವು ವಿವೇಕ ಪ್ರಭ ಎಂಬ ಕನ್ನಡ ಮಾಸಪತ್ರಿಕೆಯನ್ನು ಪ್ರಾರಂಭಿಸುತ್ತಿರುವ ವಿಷಯವನ್ನು ತಿಳಿದು ನನಗೆ ಸಂತೋಷವಾಗಿದೆ. ಕನ್ನಡ ಭಾಷೆಯಲ್ಲಿ ಇಂಥದೊಂದು ಪತ್ರಿಕೆ ಇರಬೇಕೆಂದು ಎರಡು ದಶಕಗಳಿಗೂ ಅಧಿಕ ಸಮಯದಿಂದ ನಾನು ಒತ್ತಾಯಿಸುತ್ತಿದ್ದೆ. ತಮಿಳು, ತೆಲುಗು, ಮಲಯಾಳಂ, ಬಂಗಾಲಿ, ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಇದೇ ರೀತಿಯ ಪತ್ರಿಕೆಗಳಿವೆ. ತಮಿಳು ಪತ್ರಿಕೆ *ರಾಮಕೃಷ್ಣ ವಿಜಯಂ ಸುಮಾರು ೯೦,೦೦೦* ಚಂದಾದಾರರನ್ನು ಹೊಂದಿದೆ. ಈ ಕನ್ನಡ ಪತ್ರಿಕೆಯೂ ಇದೇ ರೀತಿ ಅಧಿಕಸಂಖ್ಯೆಯಲ್ಲಿ ಚಂದಾದಾರರನ್ನು ಹೊಂದಬಾರದೇಕೆ?

ಸ್ವಾಮಿ ವಿವೇಕಾನಂದರು ಕರ್ನಾಟಕವನ್ನು ಪ್ರೀತಿಸುತ್ತಿದ್ದರು. ಅವರು ಬಹಳ ದಿನಗಳು ಅಲ್ಲಿ ಕಳೆದರು. ಮೈಸೂರು ಮಹಾರಾಜರನ್ನೂ ಇತರ ಖ್ಯಾತ ವ್ಯಕ್ತಿಗಳನ್ನೂ ಅವರು ಸಂಧಿಸಿದರು. ಮೈಸೂರು (ಈಗ ಕರ್ನಾಟಕ) ಪ್ರಗತಿಪರ ರಾಜ್ಯವಾಗುವುದೆಂಬ ಮಹದಾಸೆಯನ್ನು ಅವರು ಹೊಂದಿದ್ದರು.

ಮನುಷ್ಯನಿರ್ಮಾಣಕಾರಿ, ರಾಷ್ಟ್ರನಿರ್ಮಾಣಕಾರಿ ಭಾವನೆಗಳನ್ನು ಜನರಲ್ಲಿ ಹರಡುವ ಕಾರ್ಯದಲ್ಲಿ ವಿವೇಕಪ್ರಭವು ಒಂದು ಸಾಧನವಾಗುತ್ತದೆ. ನಮ್ಮ ಜನರು ಬಹಳಷ್ಟು ಕಲಿತಿದ್ದಾರೆ. ಆದರೆ ಆಧುನಿಕ ಪ್ರಗತಿಪರ ರಾಷ್ಟ್ರ ನಿರ್ಮಾಣವಾಗಬೇಕಾದರೆ ಅವರು ಇನ್ನೂ ಕಲಿಯುವುದು ಬಹಳವಿದೆ.

ಈ ಪತ್ರಿಕೆಯು ಲೇಖಕರ, ವಿದ್ವಾಂಸರ ಮತ್ತು ಸಾರ್ವಜನಿಕರ ಪೂರ್ಣ ಹೃದಯದ ಸಹಕಾರವನ್ನು ಪಡೆಯುವುದೆಂದು ನಾನು ಆಶಿಸುತ್ತೇನೆ. ರಾಮಕೃಷ್ಣ-ವಿವೇಕಾನಂದ ಮತ್ತು ವೇದಾಂತದ ಭಾವನೆಗಳನ್ನು ಹಾಗೂ ಆಧುನಿಕ ವೈಜ್ಞಾನಿಕ ಭಾವನೆಗಳನ್ನು ಎಲ್ಲೆಲ್ಲಿಯೂ ಪಸರಿಸುವ ಕಾರ್ಯದಲ್ಲಿ ವಿವೇಕಪ್ರಭವು ಯಶಸ್ವಿಯಾಗಲೆಂದು ನಾನು ಪ್ರೀತಿಪೂರ್ವಕವಾಗಿ ಆಶೀರ್ವದಿಸುತ್ತೇನೆ.



## ಸಂಪಾದಕೀಯ

# ಒಂದು ಹಿನ್ನೋಟ

**ನಾ**ವು ಈಗ ೨೧ನೆ ಶತಮಾನಕ್ಕೆ ಕಾಲಿಡುತ್ತಿದ್ದೇವೆ. ಮಾನವ ನಾಗರಿಕತೆಯ ವಿಕಾಸದ ಒಂದು ವಿಶೇಷ ಘಟ್ಟವನ್ನು ತಲುಪಿ, ಈಗ ಹೊಸದನ್ನು ಸಾಧಿಸುವ ಹೊಸ ಉತ್ಸಾಹದೊಂದಿಗೆ; ಮುಂದಿನ ಮಹತ್ಸಾಧನೆಗಳ ಆಶಾಪೂರ್ಣ ನಿರೀಕ್ಷೆಯೊಂದಿಗೆ; ವಿಜ್ಞಾನ ತಾಂತ್ರಿಕತೆಗಳ ನವನವೋನ್ಮೇಷಣೆಗಳ ಪ್ರತೀಕ್ಷೆಯೊಂದಿಗೆ; ಮಹಾಪ್ರಲಯದ ಭೀಕರದೃಶ್ಯದ ಕಲ್ಪನೆಯೊಂದಿಗೆ; ಮಹಾಯುದ್ಧಗಳು, ಭ್ರಷ್ಟಾಚಾರ, ದಾರುಣ ರೋಗರುಜಿನಗಳು ಇತ್ಯಾದಿಗಳಿಂದ ಉಂಟಾಗಬಹುದಾದ ಅನಾಹುತದ ಭೀತಿಯೊಡನೆ ; ಪರಿಸರ ಮಾಲಿನ್ಯ, ಪ್ರಕೃತಿ ಸಂಪತ್ತಿನ ವಿನಾಶ ಇವುಗಳ ಪರಿಣಾಮದಿಂದ ಮಾನವಕುಲವೇ ಅಂತ್ಯಗೊಳ್ಳುವುದೆಂಬ ಕಾತರತೆಯೊಡನೆ – ಹೀಗೆ ಆಶಾವಾದ ನಿರಾಶಾವಾದಗಳ ಮಿಶ್ರ ಭಾವನೆಯೊಂದಿಗೆ ಹೊಸ ಶತಮಾನದ ಮಹಾದ್ವಾರವನ್ನು ದಾಟುತ್ತಿದ್ದೇವೆ.

### ನಾಗರಿಕತೆಯ ಮುನ್ನಡೆ

ಈ ಸಂದರ್ಭದಲ್ಲಿ ಒಮ್ಮೆ ಹಿಂತಿರುಗಿ ನೋಡುವುದು ಉಚಿತವೆನಿಸುತ್ತದೆ. ಮಾನವ ಇತಿಹಾಸದ ಒಂದು ಪಕ್ಷಿನೋಟವು ನಮ್ಮ ಭವಿಷ್ಯಚಿಂತನೆಯಲ್ಲಿ ಸಹಾಯಕವಾಗುವುದರಲ್ಲಿ ಸಂದೇಹವಿಲ್ಲ. ಅಸಂಖ್ಯ ಯುದ್ಧ ಹೋರಾಟಗಳ ಸಮರಾಂಗಣದ ಮಧ್ಯದಲ್ಲಿ ; ಸಂಪತ್ತು-ವಿಪತ್ತು, ಸಾವು-ನೋವು, ಸುಖ-ದುಃಖಾದಿ ಹೂವು-ಮುಳ್ಳುಗಳ ಹಾದಿಯಲ್ಲಿ; ಬಡತನ, ಶ್ರೀಮಂತಿಕೆ, ವಿಲಾಪ,ವಿಲಾಸ ಮುಂತಾದ ವೈಪರೀತ್ಯಗಳ ನಡುವಿನಲ್ಲಿ; ಅನೇಕ ಸಂಸ್ಕೃತಿ ನಾಗರಿಕತೆಗಳ ಉದಯಾಸ್ತಗಳನ್ನು ಕಾಣುತ್ತ; ರಾಕ್ಷಸೀಕೃತ್ಯಗಳ ರುದ್ರನರ್ತನವನ್ನು ವೀಕ್ಷಿಸುತ್ತ; ಮಹತ್ಕಾರ್ಯಗಳ ಹೃದಯಂಗಮ ದೃಶ್ಯಗಳನ್ನು ನೋಡಿ ತಲೆದೂಗುತ್ತ; ಮಹಾಪುರುಷರ ಆಶೀರ್ವಾಣಿಯನ್ನು ಕೇಳಿ ಆನಂದಿಸುತ್ತ; ಪಾಶವೀ ಮನೋಭಾವದ, ಪಾಷಾಣ ಹೃದಯದ ಕ್ರೂರ ಕರ್ಕಶ ಕೂಗನ್ನು ಕೇಳಿ ತತ್ತರಿಸುತ್ತ; ಒಮ್ಮೆ ವೈಭವದ ಉನ್ನತ ಶಿಖರಕ್ಕೇರುತ್ತ, ಇನ್ನೊಮ್ಮೆ ಅಧಃಪತನದ ಪಾತಾಳಕ್ಕಿಳಿಯುತ್ತ, ನಿರ್ದಿಷ್ಟ ಕಾಲಗಣನೆಗೆ ನಿಲುಕದ ಬಹು ಪುರಾತನ ಕಾಲದ ಆದಿಮಾನವನ ಸ್ಥಿತಿಯಿಂದ ಆಧುನಿಕ ಸ್ಥಿತಿಯವರೆಗೆ ಮಾನವನು ತನ್ನ ಮಹಾಯಾತ್ರೆಯನ್ನು ಸಹಸ್ರಾರು ವರ್ಷಗಳಿಂದ ನಡೆಸಿಕೊಂಡು ಬಂದಿರುವನು.

> **ಮಾನವಜನಾಂಗ ಆಶಾವಾದ ನಿರಾಶಾವಾದಗಳ ಮಿಶ್ರಭಾವನೆಯೊಂದಿಗೆ ಹೊಸ ಶತಮಾನದ ಮಹಾದ್ವಾರವನ್ನು ದಾಟುತ್ತಿದೆ.**

ಆದಿಮಾನವನು ಪ್ರಾಣಿಗಳಂತೆ ಕಾಡಿನಲ್ಲಿ ವಾಸಿಸುತ್ತಿದ್ದನು. ಪ್ರಾಣಿಗಳನ್ನು ಬೇಟೆಯಾಡಿ ಮಾಂಸಭಕ್ಷಣದಿಂದಲೊ, ಗೆಡ್ಡೆ ಗೆಣಸುಗಳಿಂದಲೊ ತನ್ನ ಹಸಿವನ್ನು ನೀಗಿಸಿಕೊಳ್ಳುತ್ತಿದ್ದನು. ಅವನಿಗೆ ಸರಿಯಾದ ರಕ್ಷಣೆ ಇರಲಿಲ್ಲ, ವಸತಿ ಸೌಕರ್ಯವಿರಲಿಲ್ಲ. ಯಾವಾಗಲೂ ಮರಣದ ಭಯದಲ್ಲಿ ಅವನು ಇರಬೇಕಾಗುತ್ತಿತ್ತು. ಆಹಾರವನ್ನು ಅರಸುವುದರ ಕಡೆಗೇ ಅವನ ಗಮನವೆಲ್ಲ. ಅವನು ಉಣ್ಣುತ್ತಿದ್ದರೂ ಊಟದ ಸವಿಯನ್ನು ಅನುಭವಿಸಲಾರದವನಾಗಿದ್ದ. ಕಾಡಿನ ಗಿಡಮರಗಳ, ಪರ್ವತ ಶ್ರೇಣಿಗಳ ಸೌಂದರ್ಯವನ್ನು ಗುರುತಿಸಲಾರದವನಾಗಿದ್ದ. ಹೂವಿನ ಸುಗಂಧದ ಅರಿವೇ ಅವನಿಗೆ ಇದ್ದಿರಲಿಕ್ಕಿಲ್ಲ.ಇಂದ್ರಿಯಸುಖವಿದ್ದರೂ ಅದರಲ್ಲಿ ಆನಂದವನ್ನು ಕಾಣುವ ಸ್ಥಿತಿಯಲ್ಲಿ ಅವನಿರಲಿಲ್ಲ. ಏಕೆಂದರೆ ಅವನ ಪೂರ್ಣ ಕಾಲ ಶಕ್ತಿಗಳೆಲ್ಲ ತನ್ನ ದೇಹರಕ್ಷಣೆ ಮತ್ತು ಪೋಷಣೆಗಳಲ್ಲಿಯೇ ವ್ಯಯವಾಗುತ್ತಿದ್ದವು. ಒಟ್ಟಿನಲ್ಲಿ ಹೇಳಬೇಕೆಂದರೆ ಅವನ ಜೀವನ ಕೇವಲ ಅನ್ನಮಯ ಮತ್ತು ಪ್ರಾಣಮಯ ಕೋಶಗಳಿಗೆ ಮಾತ್ರ ಸೀಮಿತವಾಗಿತ್ತು.

ಕ್ರಮೇಣ ಈ ಪರಿಸ್ಥಿತಿ ಬದಲಾಯಿತು. ಮಾನವನು ವ್ಯವಸಾಯ ಮಾಡುವುದನ್ನು ಕಲಿತನು. ತನಗೆ ಬೇಕಾದ ಆಹಾರ ವಸ್ತುಗಳನ್ನು ಬೆಳೆದು ಅವನ್ನು ಶೇಖರಿಸಿಡುವುದನ್ನು ಕಲಿತನು. ಸಣ್ಣ ಸಣ್ಣ ಗುಡಿಸಲುಗಳಲ್ಲಿ ವಾಸಿಸುತ್ತ ಪ್ರಾಣಿಗಳಿಂದ ತನ್ನನ್ನು ರಕ್ಷಿಸಿಕೊಳ್ಳತೊಡಗಿದನು. ಕ್ರಮೇಣ ಕುಟುಂಬಜೀವನ, ಸಮಾಜಜೀವನ ಪ್ರಾರಂಭವಾಯಿತು. ಪರಸ್ಪರ ರಕ್ಷಣೆ ಸಹಕಾರಗಳೊಂದಿಗೆ ಮಾನವನ ಜೀವನಮಟ್ಟ ಉತ್ತಮವಾಗತೊಡಗಿತು. ಬಹುಶಃ ಈ ಸಂದರ್ಭದಲ್ಲಿ ಅವನು ಮಾತನಾಡುವುದನ್ನೂ ಕಲಿತಿರಬಹುದು. ಇದರಿಂದ ಪರಸ್ಪರ ಭಾವವಿನಿಮಯವು ಸುಲಭವಾದುದರಿಂದ ಮಾನವೀಯ ಸಂಬಂಧಗಳು ಹೆಚ್ಚು ಬೆಳೆಯತೊಡಗಿದವು. ಪತಿ-ಪತ್ನಿ, ತಂದೆ-ತಾಯಿ, ಪಿತಾ-ಪುತ್ರ ಮುಂತಾದ ಸಾಂಬಂಧಿಕ ಸುಖವನ್ನು ಮಾನವನು ಸವಿಯತೊಡಗಿದ. ದೇಹರಕ್ಷಣೆ ಮತ್ತು ಪೋಷಣೆಗಳ ಕಡೆಗಿನ ಗಮನ ಈಗ ಕಡಿಮೆಯಾದುದರಿಂದ ಅವನು ಇಂದ್ರಿಯಗಳಲ್ಲಿ ಹೆಚ್ಚು ಸುಖವನ್ನು ಕಾಣತೊಡಗಿದ. ಪ್ರಕೃತಿಯ ಸೌಂದರ್ಯದ ಕಡೆ ಅವನ ಗಮನ ಹರಿಯತೊಡಗಿತು. ಹಿಂದೆ ಅವನಲ್ಲಿ ಯಾವ ಭಾವವನ್ನೂ ಕೆರಳಿಸಲು ಅಸಮರ್ಥವಾಗಿದ್ದ ಗಿರಿ ಕಾನನಗಳು, ನದಿ ಸರೋವರಗಳು, ಚಂದ್ರ ತಾರೆಗಳು ಅವನಲ್ಲಿ ಸೌಂದರ್ಯಭಾವವನ್ನು ಕೆರಳಿಸತೊಡಗಿದವು. ಇವುಗಳಿಂದ ಕ್ರಮೇಣ ಸಂಗೀತ, ಕಾವ್ಯ, ಕಲೆ ಮುಂತಾದುವು ಬೆಳಕಿಗೆ ಬರತೊಡಗಿದವು.

### ಮನೋವಿಕಾಸ

ಈಗ ಮಾನವನಲ್ಲಿ ಕುತೂಹಲ ಕೆರಳತೊಡಗಿತು. ಅವನು ವಸ್ತುಗಳ ಬಗ್ಗೆ ಏನು, ಏಕೆ ಮತ್ತು ಹೇಗೆ ಎಂದು ಪ್ರಶ್ನಿಸತೊಡಗಿದ. ಮಕ್ಕಳು ಸ್ವಲ್ಪ ಬುದ್ಧಿ ಬೆಳೆದಕೂಡಲೆ ಕಂಡ ಕಂಡ ವಸ್ತು, ವ್ಯಕ್ತಿ,

ಘಟನೆಗಳ ಬಗ್ಗೆ ಇದೇ ರೀತಿ ಪ್ರಶ್ನಿಸತೊಡಗುತ್ತವೆ. ಮಕ್ಕಳು ಶರೀರ ಪೋಷಣೆ ಮತ್ತು ರಕ್ಷಣೆಗಳ ಕಡೆ ಗಮನ ಹರಿಸುವ ಆವಶ್ಯಕತೆ ಇಲ್ಲದುದರಿಂದ ಅವುಗಳಲ್ಲಿ ಬೇಗ ಬುದ್ಧಿ ಬೆಳೆಯುತ್ತದೆ. ಆದರೆ ಮಾನವನು ಈ ಹಂತವನ್ನು ಮುಟ್ಟಬೇಕಾದರೆ ಸಹಸ್ರಾರು ಅಥವಾ ಲಕ್ಷಾಂತರ ವರ್ಷಗಳು ಬೇಕಾದುವು. ಈ ಕೌತುಕ ಪ್ರಶ್ನೆಗಳಿಂದ ಜ್ಞಾನಾಭಿವೃದ್ಧಿ ಪ್ರಾರಂಭವಾಯಿತು. ಇದರಿಂದ ಜ್ಯೋತಿಶ್ಶಾಸ್ತ್ರ, ವಿಜ್ಞಾನ, ತತ್ತ್ವಶಾಸ್ತ್ರ ಮುಂತಾದ ಜ್ಞಾನಶಾಖೆಗಳು ಉದಯವಾದವು. ಹೀಗೆ ಅವನ ಆಲೋಚನಾಕ್ಷೇತ್ರ ವಿಸ್ತರಿಸತೊಡಗಿತು. ಮಾನವನು ತಾನು ಪಡೆದ ಜ್ಞಾನವನ್ನು ತನ್ನ ಜೀವನದಲ್ಲಿ ಅಳವಡಿಸತೊಡಗಿದ ; ಉತ್ತಮ ಮನೆಯನ್ನು ಕಟ್ಟಿಕೊಂಡು ವಾಸಿಸತೊಡಗಿದ; ಒಳ್ಳೆಯ ಒಡವೆ ವಸ್ತ್ರಗಳನ್ನು ತೊಡಲುಪಕ್ರಮಿಸಿದ; ಕೃಷಿಯ ಉದ್ಯಮ ಉತ್ತಮ ಗೊಂಡಿತು; ಪೀಠೋಪಕರಣಗಳು, ವಿವಿಧ ಬಗೆಯ ಪಾತ್ರೆ ಪದಾರ್ಥಗಳನ್ನು ಉತ್ಪಾದಿಸತೊಡಗಿದ. ಹೀಗೆ ತಾಂತ್ರಿಕತೆ ಬೆಳೆಯ ತೊಡಗಿತು, ಮಾನವನ ಕರ್ಮಕ್ಷೇತ್ರ ವಿಸ್ತಾರವಾಗತೊಡಗಿತು.

ಸೌಂದರ್ಯಾನುಭವ, ಇಂದ್ರಿಯ ಸುಖಾನುಭವ ಇವು ಗಳೊಂದಿಗೆ ಕಾವ್ಯಕಲೆ ಇತ್ಯಾದಿಗಳು ಬೆಳೆದು ಮಾನವನ ಭಾವನಾ ಕ್ಷೇತ್ರ ವಿಸ್ತಾರವಾಯಿತು; ಜ್ಞಾನಾರ್ಜನೆ ಮತ್ತು ವಿವಿಧ ಜ್ಞಾನಕ್ಷೇತ್ರಗಳ ಬೆಳವಣಿಗೆಯೊಂದಿಗೆ ಅವನ ಆಲೋಚನಾಕ್ಷೇತ್ರ ವಿಸ್ತಾರವಾಯಿತು; ಮತ್ತು ಈ ಸೌಂದರ್ಯವನ್ನೂ ಜ್ಞಾನವನ್ನೂ ಜೀವನದೊಂದಿಗೆ ಕಾರ್ಯ ಕ್ಷೇತ್ರದಲ್ಲಿ ಅಳವಡಿಸಿಕೊಳ್ಳುವ ಪ್ರಯತ್ನದೊಂದಿಗೆ ಅವನ ಇಚ್ಛಾಕ್ಷೇತ್ರವು ವಿಸ್ತಾರವಾಯಿತು. ಹೀಗೆ ಅನ್ನಮಯ, ಪ್ರಾಣಮಯ ಕೋಶದ ಹಂತದಲ್ಲಿ ವಾಸಿಸುತ್ತಿದ್ದ ಮಾನವನು ಈಗ ಮನೋಮಯ ಕೋಶದ ಹಂತವನ್ನು ತಲುಪಿದನು.

> **ಮಾನವನು ವಿಕಾಸವಾದಂತೆಲ್ಲ ಅವನ ಧಾರ್ಮಿಕ ಭಾವನೆಯೂ ವಿಕಾಸ ಹೊಂದುತ್ತದೆಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ.**

## ಧರ್ಮವಿಕಾಸ

ಮಾನವನು ವಿಕಾಸವಾದಂತೆಲ್ಲ ಅವನ ಧಾರ್ಮಿಕ ಭಾವನೆಯೂ ವಿಕಾಸಹೊಂದುತ್ತದೆಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ. ಧರ್ಮದಲ್ಲಿ ಮುಖ್ಯವಾಗಿ ಕಂಡುಬರುವ ಅಂಶ ದೇವತಾರ್ಚನೆ. ಮಾನವನು ತನ್ನನ್ನು ತಾನೇ ಕಂಡುಕೊಳ್ಳಲು, ತನ್ನನ್ನು ತಾನೇ ಅರಿಯಲು ಇಷ್ಟಪಡುತ್ತಾನೆ. ತನ್ನನ್ನು ತಾನರಿತಿರುವಂತೆಯೇ, ಆ ಅರಿವಿಗೆ ತಕ್ಕಂತೆಯೇ ಅವನ ದೇವತಾ ಕಲ್ಪನೆಯೂ ಇರುತ್ತದೆ. ಹಿಂದೆ ಅವನ ಜೀವನ ಕೇವಲ ಶರೀರಕ್ಕೆ ಸೀಮಿತವಾಗಿದ್ದಾಗ, ಕೇವಲ ಭೌತಿಕ ವಾಗಿದ್ದಾಗ, ಅವನು ಕಲ್ಲು, ಮರ ಮತ್ತು ಜಡ ವಸ್ತುಗಳನ್ನೇ ಪೂಜಿಸುತ್ತಿದ್ದ. ಅನಂತರ ಅವನ ಜೀವನವು ವಿಕಾಸಹೊಂದಿ ಅವನು ಮನೋಮಯ ಹಂತಕ್ಕೆ ಏರಿದ ಮೇಲೆ ಅವನ ದೇವತಾಕಲ್ಪನೆಯಲ್ಲಿ ಅಪಾರ ಬದಲಾವಣೆಯುಂಟಾಯಿತು. ದೇವತೆಗಳೂ ಮಾನವ ನಂತಾಗತೊಡಗಿದರು. ಅವರಲ್ಲಿಯೂ ಆಲೋಚನೆ, ಭಾವನೆ ಮತ್ತು ಇಚ್ಛಾಶಕ್ತಿಗಳು ಉಂಟಾದವು. ಅವರೂ ಮಾನವನಂತೆಯೇ ಸುಖ ದುಃಖಗಳನ್ನು ಅನುಭವಿಸತೊಡಗಿದರು. ಅವರೂ ಕೋಪತಾಪಾದಿ ಭಾವವಿಕಾರಕ್ಕೆ ಒಳಗಾಗತೊಡಗಿದರು. ಪ್ರೀತಿ ದಯೆ ಮುಂತಾದ ಕಲ್ಯಾಣಗುಣ ಸಂಪನ್ನರಾದರು. ರಕ್ತ ಮಾಂಸಗಳನ್ನು ಭಕ್ಷಿಸುತ್ತಿದ್ದ ದೇವತೆಗಳು ಈಗ ರುಚಿರುಚಿಯಾದ ಪದಾರ್ಥಗಳನ್ನೂ ಸುವಾಸನಾ ಭರಿತ ಗಂಧಧೂಪಾದಿಗಳನ್ನೂ ಸವಿಯತೊಡಗಿದರು; ಸುಂದರ ಪುಷ್ಪಮಾಲೆಗಳಿಂದ, ಆಭರಣಗಳಿಂದ, ವಸ್ತ್ರಗಳಿಂದ ಅಲಂಕರಿಸ ಲ್ಪಟ್ಟರು ; ಸಂಗೀತ ನೃತ್ಯಾದಿ ಸೇವೆಗಳನ್ನು ಆನಂದಿಸತೊಡಗಿದರು.

ಮಾನಸಿಕ ಹಂತದ ಮಾನವನ ಜೀವನ ಇತಿಹಾಸ ಸಾವಿರಾರು ವರ್ಷಗಳು ಮುಂದುವರಿಯಿತು. ಈ ಐತಿಹಾಸಿಕ ಯುಗದಲ್ಲಿ ಅನೇಕಾನೇಕ ಮಹತ್ವಪೂರ್ಣ ಘಟನೆಗಳು, ಅನೇಕಾನೇಕ ದುರಂತಗಳು ಸಂಭವಿಸಿದವು. ಹಲವಾರು ಮಹಾಯುದ್ಧಗಳು ನಡೆದವು ; ಎಷ್ಟೋ ಸಾಮ್ರಾಜ್ಯಗಳು ಉದಯಿಸಿ ವೈಭವದಿಂದ ಮೆರೆದು ನಶಿಸಿಹೋದವು; ವಿವಿಧ ಸಂಸ್ಕೃತಿಗಳು ಜನ್ಮತಾಳಿ, ಮಾನವವಿಕಾಸಕ್ಕೆ ತಮ್ಮ ಕೊಡುಗೆಯನ್ನು ನೀಡಿ ಕಣ್ಮರೆಯಾದವು; ಎಷ್ಟೋ ಜನಾಂಗಗಳು ರಾಷ್ಟ್ರಗಳು ಹೇಳಹೆಸರಿಲ್ಲದಂತೆ ಅಳಿಸಿಹೋದವು ; ಅಸಂಖ್ಯ ಸಾಮಾಜಿಕ ಉತ್ಪಾತಗಳು, ರಾಜಕೀಯ ವಿಪ್ಲವಗಳು ನಡೆದುಹೋದವು ; ಮಹಾ ವಿಭೂತಿಪುರುಷರು ಉದಯಿಸಿ ಕಾಲದ ನಭೋಮಂಡಲದಲ್ಲಿ ನಕ್ಷತ್ರಗಳಂತೆ ಬೆಳಗುತ್ತ ಇಂದಿಗೂ ಬೆಳಕನ್ನು ಚೆಲ್ಲುತ್ತಿರುವರು ; ಅಸಂಖ್ಯ ಸಾಹಿತ್ಯ ಮತ್ತು ಕಲಾಕೃತಿಗಳು ಅಂದಿನ ಜನರ ಅದ್ಭುತ ಪ್ರತಿಭೆಯ ಮೂಕ ಸಾಕ್ಷಿಯಾಗಿ ಇಂದಿಗೂ ಬೆಳಗುತ್ತಿರುವುವು ; ವಿಜ್ಞಾನ ತಾಂತ್ರಿಕತೆಗಳ ಅತ್ಯಾಶ್ಚರ್ಯಕರ ಬೆಳವಣಿಗೆ ಮಾನವನ ಅಪಾರ ಸಾಧ್ಯತೆಗಳ ಒಂದು ಪರಿಚಯವನ್ನು ನೀಡಿದೆ.

## ಇಂದಿನ ಸ್ಥಿತಿ

ಆದರೂ ಮಾನವ ಜನಾಂಗವು ವಿಕಾಸದ ಹಾದಿಯಲ್ಲಿ ಮುನ್ನಡೆಯುತ್ತಿರುವುದೇ ಅಥವಾ ಅವನತಿ ಹೊಂದುತ್ತಿರುವುದೇ–ಎಂಬ ಸಂದೇಹ ಅನೇಕ ವೇಳೆ ಮನಸ್ಸಿನಲ್ಲಿ ಮೂಡುತ್ತದೆ – ವಿಶೇಷವಾಗಿ ಇಂದಿನ ಜಾಗತಿಕ ಪರಿಸ್ಥಿತಿಯನ್ನು ಗಮನಿಸಿದಾಗ. ಎಲ್ಲೆಲ್ಲಿಯೂ ಅನೀತಿ ಅತ್ಯಾಚಾರಗಳು ಕಾಣುತ್ತಿವೆ, ಹಿಂಸಾಚಾರ ಅತಿಯಾಗುತ್ತಿದೆ, ಪರಮಾಣು ಯುದ್ಧದ ಭೀತಿಯ ಕಾರ್ಮೋಡ ಸುತ್ತಲೂ ಆವರಿಸುತ್ತಿದೆ, ಹಿಂದೆಂದೂ ಕೇಳರಿಯದ ಮಾನಸಿಕ ರೋಗಗಳಿಂದ ಮಾನವನು ನರಳುತ್ತಿದ್ದಾನೆ. ಈ ಪಟ್ಟಿಯನ್ನು ಹೀಗೇ ಬೆಳೆಸುತ್ತ ಹೋಗಬಹುದು. ಅನೇಕ ಮೇಧಾವಿಗಳು ಇಂದಿನ ದುಃಸ್ಥಿತಿಯ ಕರಾಳ ಚಿತ್ರವನ್ನು ನಮಗೆ ನೀಡಿರುವರು. ಇದೆಲ್ಲದರಿಂದ ಮಾನವನು ಹೆಚ್ಚು ಹೆಚ್ಚು ಪ್ರಾಣಿಸಹಜ ಸ್ಥಿತಿಗೆ ಹೋಗುತ್ತಿರುವನು, ಅವನಲ್ಲಿ ಹಿಂಸಾತ್ಮಕ ಪ್ರವೃತ್ತಿ ಬೆಳೆಯುತ್ತಿದೆ ಎಂದೆನಿಸುತ್ತದೆ. ಆದರೆ ಹಿಂಸಾತ್ಮಕ ಕೃತ್ಯಗಳು ಮತ್ತು ಯುದ್ಧಗಳ ಸಂಖ್ಯೆ ಅಧಿಕವಾಗುತ್ತಿರುವುದರಿಂದಲೇ ಮಾನವನು ಒಟ್ಟಿನಲ್ಲಿ ಹೆಚ್ಚು ಕ್ರೂರಿಯಾಗುತ್ತಿದ್ದಾನೆ ಎಂದು ಹೇಳಲಾಗುವುದಿಲ್ಲ. ಹಿಂದೆಯೂ, ನಮ್ಮ ಇತಿಹಾಸದಲ್ಲಿ ವರದಿಯಾಗದ, ಎಷ್ಟೋ ಹಿಂಸಾತ್ಮಕ ಕೃತ್ಯಗಳು, ಯುದ್ಧಗಳು ನಡೆದಿರಬಹುದು–ಆಗ ಈಗಿನಂತೆ ಸಮೂಹಮಾಧ್ಯಮವಿರಲಿಲ್ಲ. ಈಗ ಯುದ್ಧ ಮತ್ತು ಹಿಂಸಾತ್ಮಕ ಕೃತ್ಯಗಳು ವೃದ್ಧಿಯಾಗುವುದಕ್ಕೆ ಇನ್ನೊಂದು ಕಾರಣ, ಆಧುನಿಕ

ತಾಂತ್ರಿಕತೆಯ ಪರಿಣಾಮವಾಗಿ ಪ್ರಪಂಚದ ಜನರೆಲ್ಲರೂ ಹತ್ತಿರ ಹತ್ತಿರ ಬರುತ್ತಿರುವುದು. ಹಿಂದೆ ದೇಶ ದೇಶಗಳು, ಜನಾಂಗ ಜನಾಂಗಗಳು ದೂರವಿದ್ದುದರಿಂದ ಯುದ್ಧದ ಸಾಧ್ಯತೆಯೂ ಕಡಮೆಯಿತ್ತು. ಆದ್ದರಿಂದ ಮಾನವನು ಹೆಚ್ಚು ಕ್ರೂರಿಯಾಗುತ್ತಿದ್ದಾನೆ ಎಂಬುದನ್ನು ಒಪ್ಪಲಾಗುವುದಿಲ್ಲ. ಅಷ್ಟೇ ಅಲ್ಲದೆ, ಹಿಂದೆ ಒಬ್ಬನನ್ನು ಕೊಲ್ಲುವುದಕ್ಕೆ ವ್ಯಕ್ತಿಯು ಅತ್ಯಂತ ಕ್ರೂರಿಯಾಗಿರಬೇಕಿತ್ತು. ಏಕೆಂದರೆ ಕತ್ತಿ, ಈಟಿ, ಬಾಣ ಮುಂತಾದುವುಗಳಿಂದ ತಿವಿದು ತಿವಿದು ಚಿತ್ರಹಿಂಸೆಗೆ ಒಳಪಡಿಸಿ ಕೊಲ್ಲಬೇಕಾಗುತ್ತಿತ್ತು. ಈಗ ದೂರದಿಂದ ಒಂದು ಗುಂಡೇಟು ಸಾಕು. ಅಷ್ಟೇನೂ ಕ್ರೂರಿಯಲ್ಲದ ಸಾಮಾನ್ಯ ವ್ಯಕ್ತಿಯೂ, ಸ್ವಲ್ಪ ಕೋಪ ಕೆರಳಿದರೂ ಆ ಕೆಲಸವನ್ನು ಮಾಡಬಲ್ಲನು.

ಇದೇ ವಾದವೂ ಅನೈತಿಕತೆಯ ವೃದ್ಧಿಗೂ (ವೃದ್ಧಿಸಿರುವುದು ನಿಜವಾದರೆ) ಅನ್ವಯಿಸುತ್ತದೆ. ಆದ್ದರಿಂದ ಹಿಂಸಾತ್ಮಕ ಕೃತ್ಯಗಳ ಮತ್ತು ಅನೈತಿಕತೆಯ ಆಧಿಕ್ಯ ಮಾನವನ ಕ್ರೌರ್ಯ ಮತ್ತು ಅನೀತಿ ವೃದ್ಧಿಯಾಗುತ್ತಿದೆ ಎಂಬುದನ್ನು ಸೂಚಿಸುವುದಿಲ್ಲ. ಇದರ ಬದಲು ಅವನು ಹೆಚ್ಚು ನೀತಿವಂತನಾಗುತ್ತಿದ್ದಾನೆ ಮತ್ತು ಸೌಮ್ಯನೂ ಸುಸಂಸ್ಕೃತನೂ ಆಗುತ್ತಿದ್ದಾನೆ ಎಂಬುದಕ್ಕೆ ಎಷ್ಟೋ ನಿದರ್ಶನಗಳಿವೆ.

## ಆತ್ಮಪ್ರಜ್ಞೆ

ವ್ಯಕ್ತಿಯ ವಿಕಾಸದ ಮುಂದಿನ ಹಂತ ವಿಜ್ಞಾನಮಯಕೋಶ. ಇದು ವ್ಯಕ್ತಿಯ ವೈಯಕ್ತಿಕ ಪ್ರಜ್ಞೆಯನ್ನು ನಿರ್ದೇಶಿಸುತ್ತದೆ, ನಾನು ಅಥವಾ ಅಹಂಪ್ರಜ್ಞೆಗೆ ಸಂಬಂಧಿಸಿದುದು. ವೇದಾಂತದಲ್ಲಿ ಜೀವಾತ್ಮವೆಂದು ಕರೆಯುವುದು ಇದನ್ನೇ. ಅಂತಃಕರಣದ ಮೂಲಕ ಪ್ರತಿಬಿಂಬಿತವಾಗುವ ಆತ್ಮನ ಬೆಳಕು ಈ ಅಹಂಪ್ರಜ್ಞೆಯನ್ನು ಕೆರಳಿಸುತ್ತದೆ. ವ್ಯಕ್ತಿಯು ಸಂಪೂರ್ಣವಾಗಿ ಭೌತಿಕ ಮತ್ತು ಮಾನಸಿಕ ಹಂತಕ್ಕೆ ಬದ್ಧನಾಗಿರುವಾಗ ಈ ಪ್ರಜ್ಞೆಯು ಸುಪ್ತವಾಗಿ ಉಳಿದಿರುತ್ತದೆ. ಕೆಳಗಿನ ಹಂತದ ಅವಶ್ಯಕತೆಗಳೆಲ್ಲ ತೀರಿದಮೇಲೆ ಈ ಅಹಂಪ್ರಜ್ಞೆಯು ತನ್ನ ಇರುವಿಕೆಯನ್ನು ತೋರಿಸಿಕೊಳ್ಳತೊಡಗುತ್ತದೆ. ಆಗ ವ್ಯಕ್ತಿಯು ಅಹಂನ ಆವಶ್ಯಕತೆಗಳ ಕಡೆಗೆ ಗಮನ ಹರಿಸಬೇಕಾಗುತ್ತದೆ–ಅದಕ್ಕೆ ಆಹಾರವನ್ನು ನೀಡಬೇಕಾಗುತ್ತದೆ. ಪ್ರಶಂಸೆ, ಕೀರ್ತಿ, ಹೆಸರು, ಸಾಮಾಜಿಕ ಸ್ಥಾನಮಾನಗಳು ಇವೆಲ್ಲವೂ ಅದರ ಆಹಾರ. ತೀರ ಕೆಳಗಿನ ಭೌತಿಕ ಮತ್ತು ಮಾನಸಿಕ ಹಂತದಲ್ಲಿ ಬಾಳುವವರಿಗೆ ಈ ಕೀರ್ತಿಕಾಮನೆ ಅಷ್ಟಾಗಿ ಇರುವುದಿಲ್ಲ. ಅವರು ದೈನಂದಿನ ಜೀವನದ ಆಗುಹೋಗುಗಳಲ್ಲೇ ಸಂಪೂರ್ಣ ಮಗ್ನರಾಗಿರುತ್ತಾರೆ. ಇದು ವಿಕಾಸದ ಮೇಲಿನ ಹಂತವನ್ನು ತಲುಪಿದವರಲ್ಲೇ ಹೆಚ್ಚಾಗಿ ಕಾಣಿಸಿಕೊಳ್ಳುವುದು.

ಈಗ ಮಾನವ ಜನಾಂಗವೂ ಇದೇ ಹಂತದಲ್ಲಿ ಇರುವಂತೆ ಕಂಡುಬರುತ್ತದೆ. ಎಲ್ಲೆಲ್ಲಿಯೂ ಸಾಮಾಜಿಕ ಮನ್ನಣೆಗಾಗಿ ಜನರು ಹಾತೊರೆಯುವುದನ್ನು ನಾವು ಕಾಣುತ್ತೇವೆ. ಏನೇನೊ ವಿಚಿತ್ರ ವಿಚಿತ್ರವಾದ ಸಾಹಸಗಳನ್ನು ಮಾಡಿ ಗಿನ್ನೆಸ್ ಬುಕ್‌ನಲ್ಲಿ ತಮ್ಮ ಹೆಸರು ಬರುವಂತೆ ಪ್ರಯತ್ನಿಸುತ್ತಾರೆ. ಒಳ್ಳೆಯದೊ ಕೆಟ್ಟದ್ದೊ ಏನಾದರೂ ಮಾಡಿ ಪತ್ರಿಕೆಯಲ್ಲಿ ತಮ್ಮ ಚಿತ್ರ ಮತ್ತು ಹೆಸರು ಬಂದರೆ ಜನರ ಸಂತೋಷಕ್ಕೆ ಪಾರವೇ ಇಲ್ಲ. ಏನೇನೊ ಭ್ರಷ್ಟಾಚಾರಗಳನ್ನು ಮಾಡಿ ಜೈಲಿಗೆ ಹೋದವರೇ ಈಗ ಪ್ರಖ್ಯಾತರಾಗುತ್ತಾರೆ. ವೀರಪ್ಪನಂತಹ ನರಹಂತಕನೂ ಪ್ರಸಿದ್ಧನಾಗುತ್ತಾನೆ. ಈಗ ಪ್ರಖ್ಯಾತಿ ಮತ್ತು ಕುಖ್ಯಾತಿ ಎಲ್ಲ ಒಂದೇ ಆಗಿಬಿಟ್ಟಿದೆ. ಇದು ಅಹಂಪ್ರಜ್ಞೆಯ ಜಾಗೃತಿಯ ಪ್ರಥಮಾಂಕುರವನ್ನು ಸೂಚಿಸುತ್ತದೆ. ಇದು ಬೆಳೆದು ಪ್ರೌಢವಾದಂತೆಲ್ಲ ತನ್ನನ್ನರಸುವ ಹಂಬಲವಾಗಿ ಪರಿವರ್ತಿತವಾಗುತ್ತದೆ. ಆಗ ವ್ಯಕ್ತಿ ತನ್ನನ್ನು ತಾನು ಅರಸಲು ಪ್ರಯತ್ನಿಸುತ್ತಾನೆ, ತನ್ನ ನಿಜವಾದ ಆಧ್ಯಾತ್ಮಿಕ ನೆಲೆಯನ್ನು ತಲುಪಲು ಹಂಬಲಿಸುತ್ತಾನೆ –ಪ್ರತಿಬಿಂಬದ ಮೂಲವಾದ ಬಿಂಬವನ್ನು ತಲುಪಲು ಹವಣಿಸುತ್ತಾನೆ. ಈ ಆತ್ಮಾನ್ವೇಷಣೆ ವಿಜ್ಞಾನಮಯ ಕೋಶದ ಅನ್ವಯಾತ್ಮಕ ರೂಪ.

ಇತ್ತೀಚಿನ ದಿನಗಳಲ್ಲಿ ಆತ್ಮಪ್ರಜ್ಞೆಗೆ ಹೆಚ್ಚಿನ ಪ್ರಾಮುಖ್ಯವನ್ನು ನೀಡಲಾಗುತ್ತಿದೆ. ಧಾರ್ಮಿಕ ಕ್ಷೇತ್ರದಲ್ಲಿ ಈ ಆತ್ಮಪ್ರಜ್ಞೆಗೆ ಸಂಬಂಧಿಸಿದ ಅನೇಕ ಸಾಧನವಿಧಾನಗಳು ಜಗತ್ತಿನಾದ್ಯಂತ ಪ್ರಚಲಿತವಾಗುತ್ತಿವೆ. ಮನಶ್ಶಾಸ್ತ್ರಜ್ಞರು ಆತ್ಮಪ್ರಜ್ಞೆಯ ಅಭ್ಯಾಸದ ಮೂಲಕ ಮಾನಸಿಕ ರೋಗಗಳಿಂದ ಮುಕ್ತರಾಗಬಹುದೆಂಬುದನ್ನು ಒತ್ತಿಹೇಳುತ್ತಿದ್ದಾರೆ. ವೈದ್ಯರೂ ಕೂಡ ಇದನ್ನು ಕುರಿತಾಗಿ ಈಗ ಮಾತನಾಡುತ್ತಿರುವರು. ಇತ್ತೀಚಿನವರೆಗೂ ವಿಷಯವನ್ನೇ ಪ್ರತ್ಯೇಕವಾಗಿ ಅಧ್ಯಯನ ಮಾಡುತ್ತಿದ್ದ ವಿಜ್ಞಾನವು ಈಗ ವಿಷಯಿಯ ಕಡೆ ಗಮನ ಹರಿಸುತ್ತಿದೆ. ಈ ಎಲ್ಲ ಅಂಶಗಳು ಮಾನವನು ಈಗ ವಿಜ್ಞಾನಮಯ ಕೋಶದ ಮೇಲಿನ ಹಂತವನ್ನು ತಲುಪುತ್ತಿರುವನು ಎಂಬುದನ್ನು ಸೂಚಿಸುತ್ತದೆ.

> ಅಂತಃಕರಣದ ಮೂಲಕ ಪ್ರತಿಬಿಂಬಿತವಾಗುವ ಆತ್ಮನ ಬೆಳಕು ಅಹಂ ಪ್ರಜ್ಞೆಯನ್ನು ಕೆರಳಿಸುತ್ತದೆ... ಅಹಂನ ಹಸಿವು ಆಧ್ಯಾತ್ಮಿಕ ಆನಂದದಿಂದ ಪೂರೈಸಲ್ಪಡುತ್ತದೆ.

## ಸತ್ಯಯುಗ

ಮುಂದಿನದು ಆನಂದಮಯಕೋಶ. ಇಲ್ಲಿ ವ್ಯಕ್ತಿಯು ತನ್ನ ಆತ್ಮಪ್ರಜ್ಞೆಯನ್ನೂ ಮೀರಿಹೋಗಿ ತನ್ನ ಆಧ್ಯಾತ್ಮಿಕ ಸ್ವರೂಪದೊಡನೆ ಒಂದಾಗುತ್ತಾನೆ. ಇಲ್ಲಿ ಅಹಂನ ಹಸಿವು ಆಧ್ಯಾತ್ಮಿಕ ಆನಂದದಿಂದ ಪೂರೈಸಲ್ಪಡುತ್ತದೆ. ಈ ಹಂತದಲ್ಲಿ ಎಲ್ಲ ನೈತಿಕ ಗುಣಗಳೂ ವ್ಯಕ್ತಿಗೆ ಸ್ವಾಭಾವಿಕವಾಗುತ್ತವೆ. ಅವನ ಇಡೀ ಜೀವನವೇ ಆಧ್ಯಾತ್ಮಿಕವಾಗುತ್ತದೆ. ಅಧಿಕವಾಗಿ ಇಂತಹ ವ್ಯಕ್ತಿಗಳಿಂದ ಕೂಡಿದ ಸಮಾಜವನ್ನೇ ಸತ್ಯಯುಗವೆಂದು ಕರೆಯುವುದು. ಶ್ರೀರಾಮಕೃಷ್ಣರ ಆವಿರ್ಭಾವದೊಂದಿಗೆ ಸತ್ಯಯುಗವು ಪ್ರಾರಂಭವಾಯಿತೆಂದು ಸ್ವಾಮಿ ವಿವೇಕಾನಂದರು ಹೇಳುತ್ತಿದ್ದರು. ಮುಂದೊಂದು ಕಾಲದಲ್ಲಿ ಈ ಸತ್ಯಯುಗವು ಬರುವುದೆಂಬ ಆಶಾವಾದದೊಂದಿಗೆ ಈ ಹೊಸ ಶತಮಾನವನ್ನು ಪ್ರವೇಶಿಸೋಣ.



# ರಾಮಕೃಷ್ಣ ಮಹಾಸಂಘಕ್ಕೆ ಗಾಂಧೀ ಶಾಂತಿಪ್ರಶಸ್ತಿ

ಭಾರತ ಸರ್ಕಾರವು ಮಹಾತ್ಮಾ ಗಾಂಧೀಜಿಯವರ ೧೨೫ನೇ ವಾರ್ಷಿಕೋತ್ಸವದ ಸಂದರ್ಭದಲ್ಲಿ (೧೯೯೫) ಅಂತರರಾಷ್ಟ್ರೀಯ ಗಾಂಧೀ ಶಾಂತಿಪ್ರಶಸ್ತಿಯನ್ನು ಪ್ರಾರಂಭಿಸಿತು. ಗಾಂಧೀಜಿಯವರ ಅಹಿಂಸಾತತ್ತ್ವವನ್ನು ಆಧರಿಸಿ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪುನರುತ್ಥಾನಕ್ಕಾಗಿ ಶ್ರಮಿಸುವವರಿಗೆ ಈ ಪ್ರಶಸ್ತಿಯನ್ನು ನೀಡಲಾಗುತ್ತದೆ.

ಇದು ಭಾರತ ಸರ್ಕಾರವು ನೀಡುವ ಅತ್ಯುನ್ನತ ವಾರ್ಷಿಕ ಪ್ರಶಸ್ತಿ. ಈ ಪ್ರಶಸ್ತಿಯ ತೀರ್ಪುಗಾರರ ಮಂಡಲಿಯಲ್ಲಿ ಭಾರತದ ಪ್ರಧಾನಮಂತ್ರಿಗಳು, ಲೋಕಸಭೆಯ ವಿರೋಧಪಕ್ಷನಾಯಕರು, ಭಾರತದ ಮುಖ್ಯನ್ಯಾಯಾಧೀಶರು ಮತ್ತು ಇಬ್ಬರು ಪ್ರಮುಖ ವ್ಯಕ್ತಿಗಳು ಇರುವರು. ಈ ಪ್ರಶಸ್ತಿಯು ಒಂದುಕೋಟಿ ನಗದುಹಣ, ಪ್ರಶಸ್ತಿಪತ್ರ ಮತ್ತು ಫಲಕವನ್ನು ಒಳಗೊಂಡಿರುತ್ತದೆ.

೧೯೯೮ನೆ ಸಾಲಿನ ಗಾಂಧೀ ಶಾಂತಿಪ್ರಶಸ್ತಿಯನ್ನು ರಾಮಕೃಷ್ಣ ಮಹಾಸಂಘಕ್ಕೆ ನೀಡಲಾಯಿತು. ಸಂಘದ ಪರವಾಗಿ ಅದರ ಅಧ್ಯಕ್ಷರಾದ ಶ್ರೀಮತ್ ಸ್ವಾಮಿ ರಂಗನಾಥಾನಂದಜಿ ಮಹಾರಾಜ್ ಅವರು ಭಾರತದ ಅಧ್ಯಕ್ಷರಾದ ಶ್ರೀ ಕೆ. ಆರ್. ನಾರಾಯಣನ್ ಅವರಿಂದ ಕಲ್ಕತ್ತದ ರಾಜಭವನದಲ್ಲಿ ೧೯೯೯, ಫೆಬ್ರವರಿ ೧೨ರಂದು ಪ್ರಶಸ್ತಿಯನ್ನು ಸ್ವೀಕರಿಸಿದರು. ಆ ಸಂದರ್ಭದಲ್ಲಿ ನೀಡಿದ ಪ್ರಶಸ್ತಿಪತ್ರದ ಕನ್ನಡಾನುವಾದ ಈ ಕೆಳಗಿನಂತಿದೆ.

ಸತ್ಯ ಮತ್ತು ಅಹಿಂಸೆಗಳನ್ನು ರಕ್ಷಿಸುವುದು, ರೋಗ ಮತ್ತು ದುಃಖನಿವಾರಣೆ, ಅನಾಥರು ಮತ್ತು ನಿರ್ಗತಿಕರಿಗೆ ಆಶ್ರಯ ನೀಡುವುದು — ಇವು ಮಾನವಕೋಟಿಯು ಎದುರಿಸುತ್ತಿರುವ ಶಾಶ್ವತ ಸವಾಲುಗಳು. ಇಂತಹ ಮೂಲಭೂತ ವಿಷಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಶಿಖರಪ್ರಾಯ ವ್ಯಕ್ತಿಗಳಲ್ಲಿ ಮಹಾತ್ಮಾ ಗಾಂಧೀಜಿಯವರು ಒಬ್ಬರು.

ಗಾಂಧೀಜಿಯವರು ನಮ್ಮ ಇತಿಹಾಸ ಮತ್ತು ಸಂಸ್ಕೃತಿಯ ಸಾರಭೂತ ವ್ಯಕ್ತಿ. 'ಭಾರತವಲ್ಲದೆ ಮತ್ತಾವ ದೇಶಕ್ಕೂ, ಹಿಂದೂ ಧರ್ಮವಲ್ಲದೆ ಮತ್ತಾವ ಧರ್ಮಕ್ಕೂ ಗಾಂಧೀಜಿಯವರನ್ನು ಸೃಷ್ಟಿಸಲಾಗುತ್ತಿರಲಿಲ್ಲ' ಎಂದು ಹೇಳಲಾಗಿದೆ. ಗಾಂಧೀಜಿಯವರು ಸಮಾಜಸುಧಾರಕರು ಮತ್ತು ಕರ್ಮಯೋಗಿಗಳು. ಅವರ ಪಾಲಿಗೆ ದೇಶ ಮತ್ತು ಧರ್ಮ ಎರಡು ಕಣ್ಣುಗಳಿದ್ದಂತೆ, ಮತ್ತು ಅವರ ಜೀವನವೇ ಒಂದು ಸಂದೇಶವಾಗಿತ್ತು.

ಗಾಂಧೀಜಿಯವರ ವಿಶ್ವದೃಷ್ಟಿಯನ್ನು ಪ್ರತಿಬಿಂಬಿಸುವ ಚಿಂತನಾಧಾರೆಯನ್ನು ಹೊಂದಿದ್ದು ಅದೇ ಬೆಳಕಿನಲ್ಲಿ ಕಾರ್ಯತತ್ಪರರಾಗಿರುವವರನ್ನು ಗೌರವಿಸುವುದಕ್ಕಾಗಿ ಭಾರತ ಸರ್ಕಾರವು ಗಾಂಧೀ ಶಾಂತಿಪ್ರಶಸ್ತಿಯನ್ನು ಪ್ರಾರಂಭಿಸಿತು. ಒಂದು ಸಂಸ್ಥೆಗೆ ಈ ಪ್ರಶಸ್ತಿಯನ್ನು ನೀಡುತ್ತಿರುವುದು ಇದೇ ಮೊದಲು. ೧೮೯೭, ಮೇನಲ್ಲಿ ಸ್ವಾಮಿ ವಿವೇಕಾನಂದರಿಂದ ಸ್ಥಾಪಿತವಾದ ರಾಮಕೃಷ್ಣ ಮಹಾಸಂಘವು ಶ್ರೀರಾಮಕೃಷ್ಣ ಪರಮಹಂಸರ ಸಂದೇಶವನ್ನು ಪ್ರತಿಬಿಂಬಿಸುತ್ತದೆ. ಅವರ ಜೀವನವೇ ಧರ್ಮಾನುಷ್ಠಾನದ ಒಂದು ಕಥೆ ಎಂದು ಶ್ರೀರಾಮಕೃಷ್ಣರ ಬಗ್ಗೆ ಗಾಂಧೀಜಿಯವರು ಹೇಳುತ್ತಾರೆ.

ಶ್ರೀರಾಮಕೃಷ್ಣ ಮತ್ತು ಅವರ ಶ್ರೇಷ್ಠ ಶಿಷ್ಯರಾದ ಸ್ವಾಮಿ ವಿವೇಕಾನಂದರು ನೈಜ ಭಾರತೀಯ ಚಾರಿತ್ರ್ಯದ ಸಂಕೇತಗಳಾಗಿದ್ದರು. ಅವರು ಆಧ್ಯಾತ್ಮಿಕ ಶಕ್ತಿ, ವೈಜ್ಞಾನಿಕ ಮನೋಭಾವ, ಸರ್ವಗ್ರಾಹಿ ಅನುಕಂಪೆ ಮತ್ತು ವಿಶ್ವಭ್ರಾತೃತ್ವ—ಈ ಗುಣಗಳ ಮೂರ್ತರೂಪವಾಗಿದ್ದರು. ಶ್ರೀರಾಮಕೃಷ್ಣರ ಸರ್ವಧರ್ಮ ಏಕತೆಯ ಸಂದೇಶವನ್ನು ಆಧ್ಯಾತ್ಮಿಕ ಕ್ರಿಯಾತತ್ತ್ವವಾಗಿ ಮಾರ್ಪಡಿಸಿದವರು ಸ್ವಾಮಿ ವಿವೇಕಾನಂದರು. ಸನಾತನ ವೇದಾಂತ ತತ್ತ್ವವನ್ನು ಆಧುನಿಕ ವೈಜ್ಞಾನಿಕ ಮನಸ್ಸಿನವರಿಗೆ ಅರ್ಥವಾಗುವ ರೀತಿಯಲ್ಲಿ ಸ್ವಾಮಿ ವಿವೇಕಾನಂದರು ವಿವರಿಸಿ ಹೇಳಿದರು. ಇದರ ಮೂಲಕ ಅವರು ಅಧ್ಯಾತ್ಮವಿದ್ಯೆ ಮತ್ತು ವೈಜ್ಞಾನಿಕ ಜ್ಞಾನಗಳ ನಡುವೆ ಸೇತುಬಂಧವನ್ನೇರ್ಪಡಿಸಿದರು. ಸ್ವಾಮಿ ವಿವೇಕಾನಂದರ ಪ್ರಕಾರ ಧರ್ಮವೂ ಒಂದು ವಿಜ್ಞಾನವೆ ಮತ್ತು ಆಧುನಿಕ ವಿಜ್ಞಾನದ ಆವಿಷ್ಕಾರಗಳು ವೇದಾಂತವನ್ನು ಪ್ರತಿಧ್ವನಿಸುತ್ತಿರುವುದನ್ನು ಕೇಳಬಹುದು.

**ಶ್ರೀರಾಮಕೃಷ್ಣರ ಸರ್ವಧರ್ಮ ಏಕತೆಯ ಸಂದೇಶವನ್ನು ಆಧ್ಯಾತ್ಮಿಕ ಕ್ರಿಯಾತತ್ತ್ವವಾಗಿ ಮಾರ್ಪಡಿಸಿದವರು ಸ್ವಾಮಿ ವಿವೇಕಾನಂದರು.**

ಇಂದಿನ ವಿಜ್ಞಾನ ಮತ್ತು ತಾಂತ್ರಿಕಯುಗದಲ್ಲಿ ಸೌಂದರ್ಯ ಪ್ರಜ್ಞೆ ಮತ್ತು ಅಧ್ಯಾತ್ಮಪ್ರಜ್ಞೆಗಳೆರಡನ್ನೂ ಬೆಳಸಿಕೊಳ್ಳುವುದು

ಅಗತ್ಯ. ಮಾನವನು ಕುಂಬಾರನ ತಿರುಗು ಚಕ್ರದ ಮೇಲಿರುವ ಮಣ್ಣಿನ ಮುದ್ದೆಯಂತಲ್ಲ. ಅವನು ಸಾಮಾಜಿಕ ಪರಿಸರದ ಒಡೆಯನೂ ಹೌದು ಹಾಗೂ ಹಿಂದಿನ ಶ್ರೇಷ್ಠ ಪರಂಪರೆಯ ಉತ್ತರಾಧಿಕಾರಿಯೂ ಹೌದು. ಅವನಲ್ಲಿ ಕೌತುಕ ಮನಸ್ಸಿದೆ, ಅಂತರ್ದೃಷ್ಟಿಯ ಹೃದಯವಿದೆ, ಸಂವೇದನಾ ಸಾಮರ್ಥ್ಯವಿದೆ ಮತ್ತು ಅನ್ವೇಷಣಾ ಪ್ರವೃತ್ತಿಯಿದೆ. ಅವನಿಗೆ ಜೀವನವೃಕ್ಷವೂ ಕಬ್ಬಿಣದ ಕಂಬಿಯಷ್ಟೇ ಮುಖ್ಯ. ಈ ಆದರ್ಶದ ಪ್ರಾಮುಖ್ಯವನ್ನು ಅರಿತುಕೊಂಡು ರಾಮಕೃಷ್ಣ ಮಹಾಸಂಘವು ನಮ್ಮ ಸಂಸ್ಕೃತಿ ಪರಂಪರೆಗೆ ಸಂಬಂಧಿಸಿದ ಹಲವಾರು ಗ್ರಂಥಗಳನ್ನು ಪ್ರಕಟಿಸಿದೆ. ನಮ್ಮ ಪುರಾತನ ಭವ್ಯಪರಂಪರೆಯನ್ನು ಬೆಳಗಿಸಿ ಸಂಘವು ನಾವು ಎಂತಹ ಸುಂದರ ಮಂದಿರದಲ್ಲಿ ಜನ್ಮತಾಳಿರುವೆವು ಎಂಬುದರ ಅರಿವನ್ನು ನಮಗೆ ಉಂಟು ಮಾಡಿರುವುದು.

'ಬ್ರಹ್ಮನಿದ್ದಾನೆ' ಎನ್ನುವುದಕ್ಕೂ 'ಬ್ರಹ್ಮನೇ ನಾನಾಗಿದ್ದೇನೆ' ಎನ್ನುವುದಕ್ಕೂ ಬಹಳ ಅಂತರವಿದೆ. ಮೊದಲನೆಯದು ಪರೋಕ್ಷ ಜ್ಞಾನ, ಎರಡನೆಯದು ಅಪರೋಕ್ಷಜ್ಞಾನ. 'ದೇವರಿದ್ದಾನೆ' ಎಂದು ಹೇಳುವುದರ ಬದಲು ತಮ್ಮೊಳಗೇ ಇರುವ ದೇವರನ್ನು ಜನರು ಕಂಡುಕೊಳ್ಳಲು ಸಹಾಯ ಮಾಡಿದರೆ, ದಿವ್ಯ ಜ್ಯೋತಿಕಿರಣ ಸ್ಪರ್ಶದಿಂದ ಮಾನವಚೇತನವು ಪ್ರಸ್ಫುರಿಸುತ್ತದೆ. ಮಾನವರು ಕೇವಲ ಅಸ್ಥಿಮಾಂಸಗಳ ಹಂದರವಾಗಿ ಉಳಿಯದೆ ಸತ್ಯದ ಹರಿಕಾರರಾಗುತ್ತಾರೆ. ದಿವ್ಯತೆಯನ್ನು ನೇರವಾಗಿ ಸಂಪರ್ಕಿಸುವುದು ದಿವ್ಯತೆಯ ಅಗಾಧತೆಯನ್ನು ಅಳೆಯುವುದು ಮತ್ತು ಅನುಕಂಪೆಯ ಭಾವವನ್ನು

**ರಾಮಕೃಷ್ಣ ಮಹಾಸಂಘದ ಲಾಂಛನ**




**ಈ ಚಿತ್ರದಲ್ಲಿ ಕಾಣುವ ಸರೋವರದ ಅಲೆಗಳು ಕರ್ಮವನ್ನೂ ಕಮಲವು ಭಕ್ತಿಯನ್ನೂ ಉದಯಿಸುತ್ತಿರುವ ಸೂರ್ಯನು ಜ್ಞಾನವನ್ನೂ ಸುತ್ತಿಕೊಂಡಿರುವ ಸರ್ಪವು ಯೋಗ ಹಾಗೂ ಜಾಗ್ರತ ಕುಂಡಲಿನೀ ಶಕ್ತಿಯನ್ನೂ ಪ್ರತಿನಿಧಿಸುತ್ತವೆ. ಹಂಸವು ಪರಮಾತ್ಮನ ಪ್ರತೀಕವಾಗಿರುತ್ತದೆ.**

**ಕರ್ಮ, ಭಕ್ತಿ, ಜ್ಞಾನ ಮತ್ತು ಯೋಗ ಇವುಗಳ ಸಮನ್ವಯದ ಮೂಲಕ ಪರಮಾತ್ಮನ ದರ್ಶನ ಲಾಭವಾಗುತ್ತದೆ ಎಂಬುದು ಈ ಚಿತ್ರದ ಭಾವಾರ್ಥ.**

**– ಸ್ವಾಮಿ ವಿವೇಕಾನಂದ**

ರೂಢಿಸಿಕೊಳ್ಳುವುದು—ಇದೇ ಧರ್ಮದ ಸಾರ. ವಿವೇಕಾನಂದರು ದಿವ್ಯತೆಯ ಅಪರೋಕ್ಷಾನುಭವವನ್ನು ಪಡೆದ ಅಧ್ಯಾತ್ಮ ಪ್ರವಾದಿಯಾಗಿದ್ದರು. ಅವರ ಪಾಲಿಗೆ ಸಾಮಾಜಿಕ ಮತ್ತು ಆಧ್ಯಾತ್ಮಿಕ ಎರಡೂ ಅರ್ಥಗಳಲ್ಲಿ ನರಸೇವೆಯೇ ನಾರಾಯಣ ಸೇವೆಯಾಗಿತ್ತು.

ವಿವೇಕಾನಂದರಿಂದ ಪ್ರಾರಂಭಿತವಾದ ರಾಮಕೃಷ್ಣ ಮಹಾಸಂಘವು ಯಾವಾಗಲೂ ಕರ್ಮ ಮತ್ತು ಸೇವೆಯ ಕಡೆ ತನ್ನ ಗಮನವನ್ನು ಹರಿಸುತ್ತದೆ. ಸಂಘವು ತನ್ನದೇ ವೈಶಿಷ್ಟ್ಯವನ್ನು ವ್ಯಕ್ತಪಡಿಸಿರುವ ಸೇವಾಕ್ಷೇತ್ರಗಳು ಯಾವುವೆಂದರೆ—ಬರ ಪೀಡಿತರಿಗೆ ಪರಿಹಾರ ವಸತಿಗಳನ್ನು ಒದಗಿಸುವುದು, ಶಿಕ್ಷಣ ಸಂಸ್ಥೆಗಳ ಮೂಲಕ ಮಕ್ಕಳ ಮತ್ತು ಯುವಕರ ಸೇವೆ, ಕಲ್ಯಾಣ ಕೇಂದ್ರಗಳ ಮೂಲಕ ಪರಿಶಿಷ್ಟವರ್ಗದವರಿಗೆ ಮೂಲಭೂತ ಆವಶ್ಯಕತೆಗಳನ್ನು ಒದಗಿಸುವುದು, ವೈದ್ಯಕೀಯ ಸೇವೆಯ ಮೂಲಕ ಜನರ ದುಃಖವನ್ನು ಪರಿಹರಿಸುವುದು, ಧರ್ಮಸಮನ್ವಯ ತತ್ತ್ವಬೋಧನೆ ಮತ್ತು ಅನುಷ್ಠಾನದ ಮೂಲಕ ಕೋಮು ಸೌಹಾರ್ದವನ್ನು ಉಂಟು ಮಾಡುವುದು ಇತ್ಯಾದಿ. ತನ್ನ ಸ್ವಂತ ಕಾರ್ಯಕ್ರಮಗಳ ಮೂಲಕ ಮತ್ತು ಭಗಿನಿ ಸಂಸ್ಥೆಯಾದ ಶ್ರೀ ಶಾರದಾಮಠದ ಮೂಲಕ ಮಹಿಳಾ ಅಭಿವೃದ್ಧಿ ಕಾರ್ಯವನ್ನೂ ಸಾಕಷ್ಟು ಮಾಡಿರುವುದು. ರಾಮಕೃಷ್ಣ ಮಹಾಸಂಘವು ಈಗ ೧೩೭ ಶಾಖೆಗಳನ್ನು ಹೊಂದಿದ್ದು, ಆಸ್ಪತ್ರೆಗಳು, ಶಾಲೆ ಕಾಲೇಜುಗಳು, ಔಷಧಾಲಯಗಳು, ಅನಾಥಾಶ್ರಮಗಳು, ವಿದ್ಯಾರ್ಥಿನಿಲಯಗಳು, ಗ್ರಾಮ ಹಾಗೂ ಗಿರಿಜನ ಕಲ್ಯಾಣ ಕೇಂದ್ರಗಳು —ಇವೇ ಮುಂತಾದ ಸಂಸ್ಥೆಗಳನ್ನು ನಡೆಸುತ್ತ ವಿಶಾಲ ಕಾರ್ಯಕ್ಷೇತ್ರವನ್ನು ಪಡೆದಿದೆ.

ದೇಶವಿದೇಶಗಳಲ್ಲಿ ರಾಮಕೃಷ್ಣ ಮಹಾಸಂಘವು ಜನರಿಗೆ ಶಾಂತಿ ಮತ್ತು ಸುಖದ ಮೂಲನೆಲೆಯಾಗಿದೆ. ಇದಕ್ಕೆ ಕಾರಣ ಅದು ನಿಃಸ್ವಾರ್ಥಸೇವೆಯನ್ನು ಭಗವತ್ಸಾಕ್ಷಾತ್ಕಾರದ ಒಂದು ಮಾರ್ಗವಾಗಿ ಪ್ರತಿಪಾದಿಸುವುದು. ಜಾತಿ, ಮತ ಅಥವಾ ಭಾಷಾ ಭೇದವಿಲ್ಲದೆ ಅದರ ಸೇವೆಯು ಎಲ್ಲರಿಗೂ ಸಲ್ಲುತ್ತದೆ. ವಿವಿಧ ಮತಾನುಯಾಯಿಗಳು ವಾಸಿಸುವ ಭಾರತದಂತಹ ದೇಶದಲ್ಲಿ ಭ್ರಾತೃತ್ವ ಮತ್ತು ಸಹಿಷ್ಣುತಾಭಾವ ಅತ್ಯಂತ ಪ್ರಸ್ತುತವಾದುದು. ಗಾಂಧೀಜಿಯವರೂ ತಮ್ಮ ಜೀವನದುದ್ದಕ್ಕೂ ಇದೇ ಆದರ್ಶವನ್ನು ಇಟ್ಟುಕೊಂಡಿದ್ದವರು.

ರಾಮಕೃಷ್ಣ ಮಹಾಸಂಘವು ಗಾಂಧೀಜಿಯವರ ನಿಃಸ್ವಾರ್ಥ ಸಮಾಜಸೇವಾಭಾವವನ್ನು ಪ್ರತಿನಿಧಿಸುತ್ತದೆ. ಕಳೆದ ಒಂದು ನೂರು ವರ್ಷದಿಂದ ಸಂಘವು ಸಮರ್ಪಣ ಮನೋಭಾವದಿಂದ ಮಾನವ ಕೋಟಿಗೆ ಸಲ್ಲಿಸುತ್ತಿರುವ ಸೇವೆಯು ಗಾಂಧೀಜಿಯವರ ಚಿಂತನೆಯನ್ನೂ, ಅನುಷ್ಠಾನವನ್ನೂ ಪ್ರತಿಬಿಂಬಿಸುತ್ತದೆ. ಭಾರತ ಸರ್ಕಾರವು ೧೯೯೮ನೆ ಸಾಲಿನ ಗಾಂಧೀ ಶಾಂತಿಪ್ರಶಸ್ತಿಯನ್ನು ರಾಮಕೃಷ್ಣ ಮಹಾಸಂಘಕ್ಕೆ ನೀಡಿ ಗೌರವಿಸಿರುವುದು ಉಚಿತವೇ ಆಗಿದೆ. □

**ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ ||**

ವ್ಯಕ್ತಿಯ ಆಧ್ಯಾತ್ಮಿಕ ಉನ್ನತಿಗಾಗಿಯೂ ಮತ್ತು ಜಗತ್ತಿನ ಹಿತಕ್ಕಾಗಿಯೂ ಶ್ರಮಿಸುವುದೇ ರಾಮಕೃಷ್ಣ ಮಹಾಸಂಘದ ಧ್ಯೇಯೋದ್ದೇಶ.

# ಆಧುನಿಕ ಹಿಂದೂ ಸಮಾಜ ಮತ್ತು ಹಿಂದೂಧರ್ಮ

ಸ್ವಾಮಿ ಹರ್ಷಾನಂದ

## ಉಪೋದ್ಘಾತ

ಇಂದು ನಮ್ಮ ಹಿಂದೂ ಸಮಾಜದಲ್ಲಿ ಕೆಲವು ರೀತಿಯ ವಿರೋಧಾಭಾಸಗಳನ್ನು ಕಾಣುತ್ತೇವೆ. ಒಂದು ಕಡೆ ಹೊಸ ದೇವಸ್ಥಾನಗಳ ಸಂಖ್ಯೆ, ಹಾಗೆಯೇ ಹಳೆಯ ಸುಪ್ರಸಿದ್ಧ ದೇವಾಲಯಗಳಿಗೆ ಯಾತ್ರೆ ಹೋಗುವವರ ಸಂಖ್ಯೆ ಬೆಳೆಯುತ್ತಿದ್ದಂತೆಯೇ ಅತ್ಯಂತ ಅಶ್ಲೀಲ ಬೀಭತ್ಸ ಸಿನಿಮಾಗಳನ್ನು ನೋಡುವವರ ಸಂಖ್ಯೆಯೂ ದಿನೇ ದಿನೇ ಬೆಳೆಯುತ್ತಿದೆ. ಇದರ ಫಲವಾಗಿ ಅಂತಹ ಸಿನಿಮಾಗಳನ್ನು ತಯಾರಿಸುವುದೂ ಮಿತಿ ಮೀರಿ ಹೆಚ್ಚುತ್ತಿದೆ. ಜೊತೆ ಜೊತೆಯಲ್ಲಿಯೇ ಮದ್ಯದ ಮಾರಾಟದ ಮಳಿಗೆಗಳೂ ಅಧಿಕವಾಗುತ್ತಿವೆ. ದೇವಾಲಯಗಳಲ್ಲಿ ವಿಶೇಷ ಪೂಜೆ, ಹರಕೆ ಸಲ್ಲಿಸುವುದು, ಹುಂಡಿಗಳಿಗೆ ಧಾರಾಳವಾಗಿ ಹಣ ಹಾಕುವುದು — ಇವು ಹೆಚ್ಚಾಗುತ್ತಿದ್ದಂತೆಯೇ ವಿವಿಧ ಭೋಗಗಳಿಗಾಗಿ ದುಂದುವೆಚ್ಚ ಮಾಡುವುದು, ಜೂಜು, ಲಂಚಗುಳಿತನ ಮತ್ತು ಅನೈತಿಕ ವ್ಯವಹಾರಗಳು — ಇವೂ ಬೆಳೆಯುತ್ತಿವೆ. ವಿವಿಧ ರೀತಿಯ ಅಪರಾಧಗಳ ಹೆಚ್ಚಳದ ಬಗ್ಗೆಯಂತೂ ಹೇಳುವಂತೆಯೇ ಇಲ್ಲ. ಏಕೆ ಹೀಗಾಗಿದೆ, ಅದೂ ನೈತಿಕ ಆಧ್ಯಾತ್ಮಿಕ ಮೌಲ್ಯಗಳಿಗೆ ತವರೂರಾದ ಈ ಭಾರತ ಭೂಮಿಯಲ್ಲಿ, ಹಿಂದೂಸ್ಥಾನದಲ್ಲಿ? ಇದೊಂದು ಜಟಿಲ ಪ್ರಶ್ನೆ, ಅತಿ ಶೀಘ್ರವಾಗಿ ಪರಿಹರಿಸಬೇಕಾಗಿರುವ ಪ್ರಶ್ನೆ.

ಹಿಂದೂಧರ್ಮದ ಭಾವನೆಗಳು ಇಂದಿನ ಬದಲಾದ ಸಾಮಾಜಿಕ ಪರಿಸ್ಥಿತಿಯಲ್ಲಿಯೂ ಎಷ್ಟು ಪ್ರಸ್ತುತ ಎಂಬುದನ್ನು ಸ್ವಾಮಿ ಹರ್ಷಾನಂದರು ವಿವರಿಸುತ್ತಾರೆ. ಪ್ರಸ್ತುತ ಬೆಂಗಳೂರು ರಾಮಕೃಷ್ಣ ಮಠದ ಅಧ್ಯಕ್ಷರಾಗಿರುವ ಸ್ವಾಮೀಜಿಯವರು ಹಿಂದೂಧರ್ಮಕ್ಕೆ ಸಂಬಂಧಿಸಿದಂತೆ ಕನ್ನಡ ಮತ್ತು ಆಂಗ್ಲ ಭಾಷೆಗಳಲ್ಲಿ ಹಲವಾರು ಗ್ರಂಥಗಳನ್ನು ರಚಿಸಿರುವರು.

## ಹಿಂದೂಸಮಾಜವು ಎದುರಿಸುತ್ತಿರುವ ಸಮಸ್ಯೆಗಳು

ಹಿಂದೂಸಮಾಜದ ಇಂದಿನ ಪರಿಸ್ಥಿತಿಗೆ ಮೂಲಕಾರಣ ಯಾವುದು? — ಎಂಬುದನ್ನರಿತರೆ ಪರಿಹಾರವನ್ನು ಸುಲಭವಾಗಿ ಕಂಡುಹಿಡಿಯಬಹುದು. ಸಹಸ್ರಾರು ವರುಷಗಳಿಂದ ನಮ್ಮನ್ನು ಕಾಪಾಡಿಕೊಂಡು ಬಂದಿದ್ದ ಧರ್ಮವನ್ನು ಮರೆತದ್ದು, ಅದರಲ್ಲಿ ಶ್ರದ್ಧೆಯನ್ನು ಕಳೆದುಕೊಂಡದ್ದು, ಅಭಿಮಾನಶೂನ್ಯರಾದದ್ದು— ಇದೇ ಆ ಮೂಲಕಾರಣ. ವಿಜ್ಞಾನದ ಅದ್ಭುತಸಾಧನೆಗಳು, ಪಾಶ್ಚಾತ್ಯದೇಶಗಳೊಡನೆ ನಿಕಟಸಂಪರ್ಕ, ಇತರ ಧರ್ಮಗಳ ಅನುಯಾಯಿಗಳಿಂದ ಆಗುತ್ತಿರುವ ಬಿರುಸಿನ ಪ್ರಚಾರ ಅಥವಾ ಅಪಪ್ರಚಾರ ಇವು ಒಂದು ಕಡೆ, ನಮ್ಮ ಸಂವಿಧಾನದಲ್ಲಿ ಒಪ್ಪಿರುವ ಸೆಕ್ಯುಲರ್ ತತ್ತ್ವದ ವಿಪರ್ಯಾಸದಿಂದ ಹಿಂದೂ ಸಮಾಜಕ್ಕೆ ಆಗುತ್ತಿರುವ ಅನ್ಯಾಯ ಅಪಚಾರ ಮತ್ತೊಂದು ಕಡೆ —ಇವೂ ಸಹ ಆ ಮೂಲಕಾರಣಕ್ಕೆ ಪೋಷಕಗಳು.

ಧರ್ಮವಿರುವುದು ನಿಜವಾಗಿ ಆಧ್ಯಾತ್ಮಿಕತೆಯ ವಿಕಾಸದಲ್ಲಿ, ಬಾಹ್ಯ ಆಚರಣೆಗಳಲ್ಲಲ್ಲ. ನಾವು ಮೊದಲನೆಯದನ್ನು ಮರೆತು ಎರಡನೆಯದಕ್ಕೆ ಪ್ರಾಮುಖ್ಯವಿತ್ತಿರುತ್ತೇವೆ. ಇದು ಹಣ್ಣಿನ ತಿರುಳನ್ನು ಬಿಸುಟು ಸಿಪ್ಪೆಯನ್ನು ಜಗಿದು ತಿನ್ನುವಂತೆ! ಆಧ್ಯಾತ್ಮಿಕತೆಯ ವಿಕಾಸಕ್ಕೆ ನೈತಿಕ ತತ್ತ್ವಗಳನ್ನು ಆಚರಿಸುವುದು ಮೊದಲ ಹೆಜ್ಜೆ. ತನ್ಮೂಲಕ ಮನಸ್ಸು ಶುದ್ಧವಾದಾಗ ಯೋಗದ ಅನುಷ್ಠಾನದಿಂದ ಅತೀಂದ್ರಿಯ ಆತ್ಮದ, ಚೈತನ್ಯದ, ಅನುಭವನ್ನು ಪಡೆಯುವುದು ಕಡೆಯ ಹೆಜ್ಜೆ. ಇದನ್ನು ಪಡೆದಾಗಲೇ ನಾವು ನಿಜವಾದ ಅರ್ಥದಲ್ಲಿ ಧಾರ್ಮಿಕರಾಗುವುದು! ಈ ದಿಕ್ಕಿನಲ್ಲಿ ಪ್ರಗತಿಯನ್ನು ಸಂಪಾದಿಸಿದಾಗ ಮಾತ್ರ ನಮ್ಮ ಸಮಸ್ಯೆಗಳ ಪರಿಹಾರವೂ ಸುಲಭವಾಗುತ್ತದೆ

ಇಲ್ಲಿ **ಸೆಕ್ಯುಲರ್ ಸ್ಟೇಟ್** ಶಬ್ದದ ವಿವೇಚನೆಯನ್ನು ಮಾಡಿದರೆ ತಪ್ಪಾಗಲಾರದು. ಅದರ ನಿಜವಾದ ಅರ್ಥ ಮತ ಧರ್ಮಗಳ ಬಗ್ಗೆ ಪಕ್ಷಪಾತವಿಲ್ಲದ ರಾಷ್ಟ್ರ ಎಂದಷ್ಟೇ ಹೊರತು ಧರ್ಮನಿರಪೇಕ್ಷವಾದ ಅಥವಾ ಧರ್ಮಾತೀತವಾದ ರಾಷ್ಟ್ರವೆಂದಲ್ಲ. ಈ ಎರಡನೆಯ ಅರ್ಥದಿಂದಲೇ ನಮ್ಮ ದೇಶದಲ್ಲಿ ಸಾಕಷ್ಟು ಅನಾಹುತವಾಗಿರುವುದು.

## ಹಿಂದೂಧರ್ಮದ ನಿರ್ವಚನ

ಹಿಂದೂ ಎಂಬ ಪದದ ಮೂಲ ಸಿಂಧೂ. ಸಿಂಧೂ ನದಿಯ ತಟವರ್ತಿಯಾದ ಮತ್ತು ಅದರ ಪೂರ್ವಕ್ಕಿರುವ ದೇಶವೇ ಸಿಂಧೂದೇಶ. ಅಲ್ಲಿ ವಾಸಿಸುತ್ತಿರುವ ಜನರ ಧರ್ಮವೇ ಸಿಂಧೂ ಧರ್ಮ. ಇದು ಪರ್ಷಿಯನರ ವಾಗ್ವೈಖರಿಗೆ ಸಿಕ್ಕಿ ಹಿಂದೂದೇಶ,

**ಧರ್ಮವಿರುವುದು ನಿಜವಾಗಿ ಆಧ್ಯಾತ್ಮಿಕತೆಯ ವಿಕಾಸದಲ್ಲಿ, ಬಾಹ್ಯ ಆಚರಣೆಗಳಲ್ಲಲ್ಲ. ನಾವು ಮೊದಲನೆಯದನ್ನು ಮರೆತು ಎರಡನೆಯದಕ್ಕೆ ಪ್ರಾಮುಖ್ಯವಿತ್ತಿರುತ್ತೇವೆ.**

ಹಿಂದೂಧರ್ಮ ಎಂದಾಯಿತು ಎನ್ನುತ್ತಾರೆ ವಿವೇಕಾನಂದ ಸ್ವಾಮಿಗಳು; ಏಕೆಂದರೆ ಅವರಲ್ಲಿ ಸಕಾರದ ಬದಲು ಹಕಾರದ ಉಚ್ಚಾರಣೆಯಿರುತ್ತದೆ. ಈ ಅರ್ಥವು ಭೌಗೋಳಿಕವಾದದ್ದರಿಂದ ಇದರ ಪ್ರಕಾರ ಅವಿಭಕ್ತ ಭಾರತ ದೇಶದಲ್ಲಿ ಮೂಲತಃ ಹುಟ್ಟಿ ಬೆಳೆದ ಎಲ್ಲ ಧರ್ಮಗಳೂ ಹಿಂದೂಧರ್ಮವೇ. ಎಂದರೆ ಈಗಿನ ಹಿಂದೂಧರ್ಮ, ಜೈನಧರ್ಮ, ಬೌದ್ಧಧರ್ಮ, ಸಿಖ್‌ಧರ್ಮ, ಹಾಗೆಯೇ ಇತರ ಸ್ಥಳೀಯ ಮತಪಂಥಗಳು — ಇವೆಲ್ಲವೂ ಹಿಂದೂಧರ್ಮವೇ ಆಗುತ್ತವೆ! ಆದರೆ ಪ್ರಚಲಿತ ಅರ್ಥದಲ್ಲಿ ಕೇವಲ ವೇದಕ್ಕೆ ಅನುಗುಣವಾದ, ವೇದ ವಿರುದ್ಧವಲ್ಲದ, ವೇದಾಂತವನ್ನು ಒಪ್ಪುವ ಧರ್ಮವನ್ನು ಮಾತ್ರ ಹಿಂದೂಧರ್ಮ ಎನ್ನುತ್ತೇವೆ.

## ಮೂಲತತ್ತ್ವ

ಅನುಷ್ಠಾನದ ದೃಷ್ಟಿಕೋನದಿಂದ ನೋಡಿದಾಗ ಹಿಂದೂ ಧರ್ಮದ ಮೂಲತತ್ತ್ವವನ್ನು **ಸತ್ಯಂ ವದ, ಧರ್ಮಂ ಚರ** 'ಸತ್ಯವನ್ನು ನುಡಿ, ಧರ್ಮವನ್ನು ಆಚರಿಸು' (*ತೈತ್ತಿರೀಯೋಪನಿಷತ್* ೧.೧೧) ಎಂಬ ಎರಡು ವಾಕ್ಯಗಳಲ್ಲಿ ಹೇಳಿಬಿಡಬಹುದು.

**ಹಿಂದೂ ಧರ್ಮದ ಮೂಲತತ್ತ್ವ ಸತ್ಯಂ ವದ, ಧರ್ಮಂ ಚರ, 'ಸತ್ಯವನ್ನು ನುಡಿ, ಧರ್ಮವನ್ನು ಆಚರಿಸು.'**

ಪರಬ್ರಹ್ಮವಸ್ತುವೇ, ಪರಮಾತ್ಮನೇ **ಸತ್ಯ**. ಇದ್ದುದನ್ನು ಇದ್ದಂತೆಯೇ ಹೇಳುವುದು, ಅದರಲ್ಲೂ ಹತ್ತುಜನಕ್ಕೆ ಹಿತವಾಗುವಂತೆ, ಮನನೋಯಿಸದಂತೆ ಹೇಳುವುದೂ **ಸತ್ಯವೇ**; ಏಕೆಂದರೆ ಮನಶ್ಶುದ್ಧಿಯ ಮೂಲಕ ಇದು ಕಾಲಕ್ರಮೇಣ ಸತ್ಯಸ್ವರೂಪನಾದ ಪರಮಾತ್ಮನ ನೇರ ಅನುಭವಕ್ಕೆ ಕಾರಣವಾಗುತ್ತದೆ.

ಧರ್ಮ ಎಂದರೆ ಜಗತ್ತನ್ನು ಧರಿಸಿರುವ ಮೂಲಶಕ್ತಿ, ಪರಮಾತ್ಮ. ಹಾಗೆಯೇ, ಶಾಸ್ತ್ರಗಳು ವಿಧಿಸಿರುವ ಕರ್ತವ್ಯಕರ್ಮಗಳು. ಇವನ್ನು ಸರಿಯಾಗಿ ಮಾಡಿದರೆ, ಆಚರಿಸಿದರೆ, ಚಿತ್ತಶುದ್ಧಿಯಾಗಿ ಪರಮಾತ್ಮಸಾಕ್ಷಾತ್ಕಾರಕ್ಕೆ ಸಹಾಯವಾಗುತ್ತದೆ.

## ಅನುಷ್ಠಾನ ವೇದಾಂತ

ಈ ಮೂಲತತ್ತ್ವದ ಅನುಷ್ಠಾನದಿಂದಾಗುವ ಅನುಕೂಲ, ಅನನುಷ್ಠಾನದಿಂದಾಗುವ ಅನಾಹುತ —ಇವುಗಳನ್ನು ಕುರಿತು ಈಗ ವಿಮರ್ಶಿಸೋಣ. ಸತ್ಯವನ್ನು ನುಡಿಯುವುದು, ಧರ್ಮದಿಂದ ನಡೆದುಕೊಳ್ಳುವುದು ನಮ್ಮಲ್ಲಿ ಶತಶತಮಾನಗಳಿಂದ ಬಂದಿರುವ ಗುಣ. (ಇದನ್ನು ಭಾರತಕ್ಕೆ ಬಂದು ಹೋಗಿದ್ದ ಅನೇಕ ವಿದೇಶೀ ಪ್ರವಾಸಿಗಳು ಬರೆದಿಟ್ಟಿರುವ ದಾಖಲೆಗಳಲ್ಲಿ ಸ್ಪಷ್ಟವಾಗಿ ಕಾಣುತ್ತೇವೆ.) ಕೇವಲ ಐವತ್ತು ವರ್ಷಗಳಿಗೆ ಮುನ್ನವೂ ಇದನ್ನು ಕಾಣುತ್ತಿದ್ದೆವು. ಆದರದು ಇತ್ತೀಚೆಗೆ ತುಂಬ ಸಡಿಲವಾಗಿದೆ. ತಮ್ಮ ಅನುಕೂಲಕ್ಕೆ ಸ್ವಾರ್ಥಕ್ಕೆ ತಕ್ಕಂತೆ ಜನ ಸತ್ಯವನ್ನೋ ಅಸತ್ಯವನ್ನೋ ಅಥವಾ ಎರಡನ್ನೂ ಬೆರಸಿಯೋ ನುಡಿಯುವುದು ರೂಢಿಯಾಗಿಬಿಟ್ಟಿದೆ!

ಸತ್ಯವು ಅನಾವಶ್ಯಕವೆಂದಾದಲ್ಲಿ, ಸಮಾಜದಲ್ಲಿನ ಎಲ್ಲರೂ ಎಲ್ಲ ಸಮಯದಲ್ಲಿಯೂ ಎಲ್ಲರೊಡನೆಯೂ ಅಸತ್ಯವನ್ನೇ ಆಡುತ್ತಿದ್ದಲ್ಲಿ, ಅದರ ಪರಿಣಾಮವೇನಾದೀತೆಂಬುದನ್ನು ಯೋಚಿಸುವುದೂ ಭಯಾನಕ ! ಇತರರು ನಮ್ಮೊಡನೆ ಸುಳ್ಳು ಹೇಳಿದಾಗ, ಅದರಿಂದ ನಾವು ಸಂಕಟಕ್ಕೊಳಗಾದಾಗ, ನಮಗೆ ಹೇಗನ್ನಿಸುತ್ತದೆ? ನಾವು ಅವರಿಗೆ ಅನೃತವನ್ನಾಡಿದಾಗ ಅವರಿಗೂ ತೊಂದರೆಯಾಗುವುದಿಲ್ಲವೇ? ಇದನ್ನು ನಾವು ಯೋಚಿಸುತ್ತೇವೆಯೇ?

ಆದರೆ— ಶಾಸ್ತ್ರಗಳು ಅನುಮೋದಿಸಿರುವ ಪ್ರಾಣಾಪಾಯದಂತಹ ವಿಶೇಷಪರಿಸ್ಥಿತಿಗಳನ್ನು ಬಿಟ್ಟರೆ — ಸತ್ಯವನ್ನು ನುಡಿಯುವುದರಿಂದ ಜೀವನವು ಸುಲಭವೂ ಸರಳವೂ ಆದೀತೆನ್ನುವುದರಲ್ಲಿ ಸಂಶಯವೇ ಇಲ್ಲ.

ಹಾಗೆಯೇ ಧರ್ಮಾಚರಣೆಯೂ ಕೂಡ. ಅದನ್ನು— ನೈತಿಕ ಜೀವನ, ಕರ್ತವ್ಯಕರ್ಮ ಇತ್ಯಾದಿಗಳನ್ನು— ಕೈಬಿಟ್ಟರೆ ಸಮಾಜವು ಅಲ್ಲೋಲಕಲ್ಲೋಲವಾಗಿ ರಾಕ್ಷಸರಾಜ್ಯವು ಬರುತ್ತದೆ. ಎಂದಮೇಲೆ ಸತ್ಯ-ಧರ್ಮಗಳೆಂಬ ಚಿರಂತನ ಮೌಲ್ಯಗಳನ್ನು ಕೈಬಿಡದೆ ಹೃತ್ಪೂರ್ವಕವಾಗಿ ಸ್ವೀಕರಿಸುವುದೇ ಉತ್ತಮವಲ್ಲವೆ?

## ಸಾಮಾಜಿಕ ವೇದಾಂತ

**ಸತ್ಯಂ ವದ, ಧರ್ಮಂ ಚರ** ಎಂದು ಉಪದೇಶಿಸಿರುವ ತೈತ್ತಿರೀಯ ಉಪನಿಷತ್ತೇ ನಮ್ಮ ಸಮಾಜದ ಮುಂದೆ ಇನ್ನೂ ಮೂರು ಮೌಲ್ಯಗಳನ್ನು ಇಟ್ಟಿದೆ. ಅವೇ — **ಮಾತೃದೇವೋ ಭವ ; ಪಿತೃದೇವೋ ಭವ ; ಆಚಾರ್ಯದೇವೋ ಭವ.** ಎಂದರೆ 'ತಾಯಿಯನ್ನು, ತಂದೆಯನ್ನು ಮತ್ತು ಆಚಾರ್ಯರನ್ನು (ಗುರುವನ್ನು) ದೇವರಂತೆ ಕಾಣು!'

ಸ್ವಲ್ಪ ಗಮನವಿಟ್ಟು ಯೋಚಿಸಿದರೆ ಇದು ಅತ್ಯಂತ ಅರ್ಥಗರ್ಭಿತವಾದ, ಸಮಾಜದ ಬುನಾದಿಗೆ ಭದ್ರತೆಗೆ ಅತ್ಯಾವಶ್ಯಕವಾದ, ಉಪದೇಶ. ನಮಗೆ ಜನ್ಮವಿತ್ತು ಪೋಷಿಸಿ ಬೆಳೆಸಿ ನಮ್ಮನ್ನು ಮನುಷ್ಯರನ್ನಾಗಿ ಮಾಡಿದವರು ನಮ್ಮ ತಾಯ್ತಂದೆಯರು. ಅವರನ್ನು ಪ್ರೀತಿಯಿಂದ ಗೌರವದಿಂದ ಪೂಜ್ಯಭಾವನೆಯಿಂದ ಕಂಡರೆ ಸಂಸಾರದಲ್ಲಿ ಸುಖ ಸೌಹಾರ್ದಗಳು ನೆಲಸಲು ಸಹಾಯವಾಗುತ್ತದೆ. ಮುಂದೆ ನಮ್ಮ ಮಕ್ಕಳೂ ನಮ್ಮನ್ನು ಅದೇ ರೀತಿ ನೋಡಿಕೊಳ್ಳಲು ಬೇಕಾದ ಸ್ಫೂರ್ತಿಯನ್ನು ಪಡೆಯುತ್ತಾರೆ.

ನಮಗೆ ವಿದ್ಯಾಬುದ್ಧಿಗಳನ್ನು ಕಲಿಸಿ ಸುಸಂಸ್ಕೃತರನ್ನಾಗಿ ಮಾಡುವವರು ಆಚಾರ್ಯರು, ಉಪಾಧ್ಯಾಯರು, ಗುರುಗಳು. ಅವರ ಋಣವನ್ನು ತೀರಿಸುವುದು ಅಸಾಧ್ಯ. ಅವರನ್ನು ಪೂಜ್ಯಭಾವನೆಯಿಂದ ಕಂಡು ಸತ್ಕರಿಸುವುದಕ್ಕಿಂತ ಹೆಚ್ಚಾಗಿ ನಾವು ಏನನ್ನೂ ಮಾಡಲಾರೆವು! ಆಗ ಅವರ ಆಶೀರ್ವಾದವು ಶುಭಕಾಮನೆಯು ನಮ್ಮ ಮೇಲಿದ್ದು ನಮಗೆ ಜೀವನದಲ್ಲಿ ರಕ್ಷೆಯಾಗುತ್ತದೆ.

ಈ ಉಪದೇಶವನ್ನು ನಾವು ಹೃತ್ಪೂರ್ವಕವಾಗಿ ಆಚರಿಸಿದರೆ ಇಂದು ಎಲ್ಲೆಲ್ಲೂ ಹರಡುತ್ತಿರುವ ವೃದ್ಧಾಶ್ರಮಗಳು, ಅಥವಾ

ವೃದ್ಧಾಶ್ರಮಗಳಿಗೆ ಹಿರಿಯರನ್ನು ಸಾಗಹಾಕುವ ಪ್ರವೃತ್ತಿ—ಇವನ್ನು ಬಹುಮಟ್ಟಿಗೆ ತಡೆಗಟ್ಟಬಹುದು.

ಆದರೆ ತಾಯ್ತಂದೆಯರೂ ಸಹ ಬೆಳೆದ ತಮ್ಮ ಮಕ್ಕಳನ್ನು — ಭೀಷ್ಮಾಚಾರ್ಯರ ಮಾತಿನಂತೆ— ಸ್ನೇಹಿತರ ಹಾಗೆ ಕಾಣುವ ಮತ್ತು ಪ್ರಬಲ ಕಾರಣವಿಲ್ಲದೆ ಅವರ ವ್ಯವಹಾರಗಳಲ್ಲಿ ತಲೆಹಾಕದಿರುವ ಗುಣವನ್ನೂ ಕಲಿಯುವುದು ಎಲ್ಲರಿಗೂ ಹಿತಕಾರಿ ಎಂಬುದನ್ನು ಒತ್ತಿ ಹೇಳಬೇಕಾಗಿಲ್ಲ.

ಇನ್ನು ಉಪಾಧ್ಯಾಯರ, ಶಿಕ್ಷಕರ, ಬಗ್ಗೆ ಒಂದು ಮಾತು. ಅವರಿಗೆ ವಿದ್ಯಾರ್ಥಿ ವಿದ್ಯಾರ್ಥಿನಿಯರು ಗೌರವ ಕೊಡಬೇಕಾದದ್ದು ಸರಿಯೇ. ಆದರೆ ಆ ಗೌರವ ಪಡೆಯಲು ಬೇಕಾದ ಅರ್ಹತೆಯನ್ನು ಅವರು ಸಂಪಾದಿಸಿಕೊಳ್ಳಬೇಕಲ್ಲವೆ? ತಾವು ಪಾಠ ಮಾಡಬೇಕಾದ ವಿಷಯದಲ್ಲಿ ಸಾಕಷ್ಟು ಜ್ಞಾನ-ಪರಿಶ್ರಮಗಳು, ನಿಃಸ್ಪೃಹತೆಯಿಂದ (ಎಂದರೆ ವ್ಯಾಪಾರೀ ಮನೋಭಾವವಿಲ್ಲದೆ!) ಪಾಠಮಾಡುವುದು, ತಮ್ಮ ಘನತೆ ಗಾಂಭೀರ್ಯಗಳಿಂದ, ಸೌಹಾರ್ದ ಮನೋಭಾವದಿಂದ ತಮ್ಮ ಶಿಷ್ಯರ ಪ್ರೀತಿ ಗೌರವಗಳಿಗೆ ಪಾತ್ರರಾಗುವುದು—ಇದು ಅವರ ಪವಿತ್ರಕರ್ತವ್ಯವಲ್ಲವೆ? ಈ ಗುಣಗಳನ್ನು ಅವರು ರೂಢಿಸಿಕೊಂಡರೆ ಗೌರವವು ತಾನಾಗಿಯೇ ಬರುತ್ತದೆ.

## ಶ್ರೀರಾಮಕೃಷ್ಣರಿತ್ತಿರುವ ಪರಿಹಾರ

ಸತ್ಯ-ಧರ್ಮಗಳೆಂಬ ಪ್ರಾಚೀನ ಮೌಲ್ಯಗಳು ಇಂದಿಗೂ ಕೆಲಸ ಮಾಡಬಲ್ಲವು, ಇಂದಿಗೂ ಅವು ಜೀವಂತ ಸಶಕ್ತ ಎಂಬುದನ್ನು ಭಗವಾನ್ ಶ್ರೀರಾಮಕೃಷ್ಣರು ತಮ್ಮ ಜೀವನ-ಸಾಧನೆಗಳ ಮೂಲಕ ತೋರಿಸಿರುತ್ತಾರೆ. ಅವರಿತ್ತಿರುವ, ಪದೇಪದೇ ಒತ್ತಿಹೇಳಿರುವ ಉಪದೇಶವೊಂದಿದೆ. ಅದೇ ಕಾಮಕಾಂಚನತ್ಯಾಗ.

ಈ ಕಾಮಕಾಂಚನತ್ಯಾಗವು ಏತಕ್ಕಾಗಿ? ಶಾಶ್ವತ ಪರಮ ಸುಖಶಾಂತಿಗಳನ್ನು ಕೊಡುವ ಈಶ್ವರಲಾಭಕ್ಕಾಗಿ, ಭಗವತ್-ಸಾಕ್ಷಾತ್ಕಾರಕ್ಕಾಗಿ.

ಆದರೆ ಈ ಕಲಿಯುಗದ ಜನ ಅದನ್ನು, ಭಗವಂತನನ್ನು ಪಡೆಯುವುದೇ ಜೀವನದ ಗುರಿಯೆಂಬುದನ್ನು ಮರೆತು ಕಾಮಕಾಂಚನಗಳಿಗಾಗಿ ಸ್ಪರ್ಧೆಗಿಳಿದು ಹೊಡೆದಾಟ ಬಡಿದಾಟಗಳಲ್ಲಿ ಮುಳುಗಿರುತ್ತಾರೆ.

ಆದುದರಿಂದಲೇ ಶ್ರೀರಾಮಕೃಷ್ಣರು ಆ ಪರಮ ಸುಖ-ಶಾಂತಿಗಳನ್ನು ಪಡೆಯಲು ಕಾಮಕಾಂಚನತ್ಯಾಗವು ಮೊದಲ ಹೆಜ್ಜೆಯೆಂಬುದನ್ನರಿತು ಅದನ್ನು ವಿಶೇಷವಾಗಿ ಉಪದೇಶಿಸಿರುತ್ತಾರೆ.

ಈ ತ್ಯಾಗವು ಎರಡು ಬಗೆ : ಭಗವತ್ಸಾಕ್ಷಾತ್ಕಾರಕ್ಕಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಟ್ಟಿರುವ ಸಂನ್ಯಾಸಿಗಳ ಯೋಗಿಗಳ ವಿಷಯದಲ್ಲಿ ಅದು ಅನುಲ್ಲಂಘ್ಯವಾದ ಮಹಾವ್ರತ. ಇತರರ ವಿಷಯದಲ್ಲಿ— ಅವರು ಧರ್ಮಕ್ಕೆ ವಿರುದ್ಧವಲ್ಲದ ಕಾಮಕಾಂಚನಗಳನ್ನು ಅನುಭವಿಸಲು ಶಾಸ್ತ್ರ ಸಮ್ಮತಿಯಿರುವುದರಿಂದ — ಅದು ಅಣುವ್ರತ.

**ಸತ್ಯ-ಧರ್ಮಗಳೆಂಬ ಪ್ರಾಚೀನ ಮೌಲ್ಯಗಳು ಇಂದಿಗೂ...ಜೀವಂತ ಸಶಕ್ತ ಎಂಬುದನ್ನು ಭಗವಾನ್ ಶ್ರೀರಾಮಕೃಷ್ಣರು ತಮ್ಮ ಜೀವನ-ಸಾಧನೆಗಳ ಮೂಲಕ ತೋರಿಸಿರುತ್ತಾರೆ.**

ಇಂದು ಪ್ರಪಂಚದ ಎಲ್ಲೆಡೆಗಳಲ್ಲಿ, ಮತ್ತು ನಮ್ಮ ದೇಶದಲ್ಲಿಯೂ ಕೂಡ, ಅಪಾಯಕಾರೀ ಮಟ್ಟವನ್ನು ಮುಟ್ಟಿರುವ ಅಪರಾಧಗಳ ಮೂಲ ಕಾಮಕಾಂಚನಗಳೇ, ಎಂದರೆ, ಅದಮ್ಯ ಲೈಂಗಿಕತೃಷೆ ಮತ್ತು ಧನಲೋಭ. ಆದುದರಿಂದಲೇ ಕಾಮಕಾಂಚನ ತ್ಯಾಗವು ಇಂದು ಅತ್ಯಂತ ಆವಶ್ಯಕ.

ಜನರು ಗೃಹಸ್ಥಧರ್ಮದ ಚೌಕಟ್ಟಿನೊಳಗೆ ಇವನ್ನು ಅಳವಡಿಸಿಕೊಂಡರೆ ಅವರೂ ಸುಖವಾಗಿರಬಹುದು, ಸಮಾಜದ ಮೇಲೂ ದುಷ್ಪರಿಣಾಮಗಳಾಗವು. ಇದೇ, ಗೃಹಸ್ಥರ ಬಗ್ಗೆ ಶ್ರೀರಾಮಕೃಷ್ಣರು ಹೇಳಿರುವ, ಕಾಮಕಾಂಚನತ್ಯಾಗ. ಈ ಉಪದೇಶವನ್ನು ಕಡೆಗಣಿಸಿ ಮನಬಂದಂತೆ ನಡೆದುಕೊಂಡರೆ— ಒಲೆಯಲ್ಲಿರಬೇಕಾದ ಬೆಂಕಿ, ಆಚೆ ಬರಲು ಅವಕಾಶವಿತ್ತಾಗ, ಮನೆಯನ್ನೇ ಸುಟ್ಟುಹಾಕುವಂತೆ—ಇಡೀ ಸಮಾಜವೇ ಭೀಕರ ಪರಿಣಾಮಗಳನ್ನು ಎದುರಿಸಬೇಕಾಗುತ್ತದೆ.

## ಉಪಸಂಹಾರ

ಹಿಂದೂಧರ್ಮದ **ಸತ್ಯಂ ವದ ಧರ್ಮಂ ಚರ** ಇತ್ಯಾದಿ ಮೂಲ ಉಪದೇಶ, ಹಾಗೂ ಅದನ್ನನುಸರಿಸಿ ಪರಮಹಂಸರಿತ್ತಿರುವ ಕಾಮಕಾಂಚನತ್ಯಾಗವೆಂಬ ಅನುಷ್ಠಾನ ವೇದಾಂತ — ಈ ಎರಡೂ ಆಧುನಿಕ ಹಿಂದೂ ಸಮಾಜವನ್ನು ಮತ್ತೆ ಸರಿಯಾದ ದಾರಿಯಲ್ಲಿ ಕರೆದುಕೊಂಡು ಹೋಗಬಲ್ಲ ಸದುಪಾಯಗಳು. ಇವು ಮಾನವ ಕುಲಕ್ಕೇ ಅನ್ವಯಿಸುವಂತಹ ಮೂಲತತ್ತ್ವಗಳಾದುದರಿಂದ ಇಡೀ ಜಗತ್ತೇ ಇವುಗಳ ಮೂಲಕ ಉದ್ಧಾರವಾಗಬಹುದು.

ಆದುದರಿಂದಲೇ, ಸನಾತನಧರ್ಮವೆಂದು ಹೆಸರು ಪಡೆದಿರುವ ಹಿಂದೂಧರ್ಮವು ಇಂದಿಗೂ ಪ್ರಸ್ತುತವಲ್ಲವೆ?



*ಶಾರದಾದ್ಯುತಿಯುಕ್ತಾಯ*
*ವಿವೇಕಾನಂದಘರ್ಮಿಣೇ |*
*ನಮಸ್ತಸ್ಮೈ ನಮಸ್ತಸ್ಮೈ*
*ಶ್ರೀರಾಮಕೃಷ್ಣಭಾನವೇ ||*

ಶಾರದಾದೇವಿ ಎಂಬ ಕಾಂತಿಯಿಂದಲೂ ವಿವೇಕಾನಂದ ಎಂಬ ಶಾಖದಿಂದಲೂ ಕೂಡಿರುವ ಶ್ರೀರಾಮಕೃಷ್ಣ ಎಂಬ ಆ ಸೂರ್ಯನಿಗೆ ಮತ್ತೆ ಮತ್ತೆ ನಮಸ್ಕಾರ !

— *ಸ್ವಾಮಿ ಹರ್ಷಾನಂದ*

# ದೇವಿಯೊ ಮಾನವಿಯೊ!

ಡಾ.ಪ್ರಭುಶಂಕರ

ಶ್ರೀಮಾತೆ ಶಾರದಾದೇವಿಯವರ ಬದುಕನ್ನು ಕುರಿತು ಚಿಂತಿಸುತ್ತಾ ಹೋದಂತೆ ಪ್ರಶ್ನೆಗಳ ಸರಮಾಲೆಯನ್ನು ಎದುರಿಸುವುದು ಅನಿವಾರ್ಯವಾಗುತ್ತದೆ. ಅವರು ಸಂಪ್ರದಾಯಸ್ಥರೆ ಇಲ್ಲವೆ ಆಧುನಿಕತೆಯನ್ನು ಮೈಗೂಡಿಸಿಕೊಂಡವರೆ? ಅಲೌಕಿಕ ವ್ಯಕ್ತಿಯೇ ಇಲ್ಲ ಲೌಕಿಕದ ಜಂಜಡದಲ್ಲಿ ಮುಳುಗಿ ಹೋಗಿರುವವರೆ? ಕಷ್ಟಗಳ ಬೆಟ್ಟಗಳನ್ನೇ ಹೊತ್ತು ಅದರಡಿಯಲ್ಲಿ ಹುಲ್ಲಾಗಿ ಬಾಳಿದವರೆ, ಇಲ್ಲ ಆ ಬೆಟ್ಟಗಳು ಅವರ ಬೆರಳ ತುದಿಯ ಗೋವರ್ಧನ ಪರ್ವತಗಳಾದುವೆ? ಶ್ರೀರಾಮಕೃಷ್ಣರು ಅವರ ಮೇಲೆ ದೈವತ್ವವನ್ನು ಹೊರಿಸಿದುದರಿಂದ ತಾವು ಜಗನ್ಮಾತೆಯ ಸ್ವರೂಪ ಎಂದು ನಂಬಿದರೆ, ಇಲ್ಲ ನಿಜವಾದ ದೈವೀ ಬಾವ ಅವರಲ್ಲಿ ತನಗೆ ತಾನೆ ಮನೆ ಮಾಡಿತ್ತೆ? ಇಷ್ಟಕ್ಕೂ ದೈವೀಭಾವ ಎಂದರೆ ಏನು? – ಹೀಗೆ ಹತ್ತು ಹಲವಾರು ಪ್ರಶ್ನೆಗಳು, ನಿಜವಾಗಿ ವಿಚಾರಶೀಲರಾದವರಲ್ಲಿ ಕಾಣಿಸಿಕೊಳ್ಳುತ್ತಾ ಹೋಗಿ ಉತ್ತರಗಳನ್ನು ಹುಡುಕುತ್ತಲೇ ಹೋಗಬೇಕಾಗುತ್ತದೆ.

**ಹೃದಯವರಿತರೂ ಬುದ್ಧಿ ಗರಿಯಿದ ಶ್ರೀಮಾತೆ ಶಾರದಾ ದೇವಿಯವರ ಸುಂದರ ವ್ಯಕ್ತಿ ಚಿತ್ರವನ್ನು ಡಾ.ಪ್ರಭುಶಂಕರರು ನೀಡಿರುವರು.**

## ಪ್ರಾಯೋಗಿಕ ವೈಚಾರಿಕತೆ

ಪತಿಯೇ ಪರದೈವ ಎಂದು ನಂಬಿದವರು ಅವರು. ಆ ಅಲೌಕಿಕ ಪತಿ ಇಹಲೋಕದ ಮತ್ತು ಪರಲೋಕದ ವಿಷಯದಲ್ಲಿ ಹೊಂದಿದ್ದ ನಂಬಿಕೆಗಳನ್ನು ಈಕೆ ಮರು ಮಾತಿಲ್ಲದೆ ಒಪ್ಪಿಕೊಂಡರು. ತಂದೆಯ ಮನೆ ಮತ್ತು ಅತ್ತೆಯ ಮನೆಗಳ ಹಬ್ಬ, ಹರಿದಿನಗಳನ್ನು ವ್ರತ ನಿಯಮಗಳನ್ನು ಮನಃಪೂರ್ವಕವಾಗಿ ಆಚರಿಸಿದರು. ಹೆಣ್ಣಿನ ಬದುಕು ಮನೆಯ ಹೊಸಲಿನ ಈಚಿನದು, ಆಚೆಗೆ ಆಕೆಗೆ ಜಗತ್ತೆಂಬುದಿಲ್ಲ ಎಂಬುದು ಹಳೆಯ ಕಾಲದ ನಿಯಮ. ಅದನ್ನು ಈಕೆ ಒಪ್ಪಿ ಅದರಂತೆ ನಡೆದರು. ಅಷ್ಟರಮಟ್ಟಿಗೆ ಆಕೆ ಸಂಪ್ರದಾಯಸ್ಥರು. ಆದರೆ ಯಾವ ಸಂಪ್ರದಾಯಗಳು ಹಿಂದೂಧರ್ಮದ ಸಂಕೋಲೆಗಳು ಎಂದು ತೋರಿದುವೋ ಅವುಗಳನ್ನು ಮುರಿಯಬೇಕಾಗಿ ಬಂದಾಗ ಆಕೆ ಹಾಗೆ ಮಾಡಲು ಹಿಂಜರಿಯಲಿಲ್ಲ.

ಹಿಂದುವೊಬ್ಬನ ಮನೆಯ ಅಂಗಳದಲ್ಲಿ ಮುಸಲ್ಮಾನನೊಬ್ಬನಿಗೆ ಊಟ ಬಡಿಸುವುದು, ಅವನು ಉಂಡಜಾಗವನ್ನು ಹಿಂದುವು ಶುದ್ಧಗೊಳಿಸುವುದು ಯಾರೂ ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲದಿದ್ದ ಕಾಲದಲ್ಲಿ ಶಾರದಾದೇವಿಯವರು ಅದನ್ನು ಮಾಡಿದರು. ಹಿಂದುವಿಗೆ ತನ್ನ ಒಳಪಂಗಡದವನಲ್ಲದೆ ಉಳಿದವರೆಲ್ಲ, ಊಟತಿಂಡಿಗಳ ವಿಷಯದಲ್ಲಿ, ಅಸ್ಪೃಶ್ಯರಲ್ಲದಿದ್ದರೂ ಅಸಹನೀಯರು. ಆದರೆ ಸಂಪ್ರದಾಯಸ್ಥರಾದ ಆಕೆ, ಅತ್ಯಂತ ಸಹಜ ಎನ್ನುವ ರೀತಿಯಲ್ಲಿ, ಅರ್ಥವೇ ಇಲ್ಲದ ಆ ಸಂಪ್ರದಾಯವನ್ನು ಮುರಿದರು. ಅಮಜಾದ್ ಅವರಿಗೆ ಮುಸಲ್ಮಾನನಾಗಿ ಕಾಣಲೇ ಇಲ್ಲ. ಮಕ್ಕಳಿಲ್ಲದ ಆಕೆಗೆ ಆತ ಸ್ವಂತ ಮಗನಂತೆ ಕಂಡ. ಹತ್ತಿರ ಹತ್ತಿರ ನೂರು ವರ್ಷಗಳಷ್ಟು ಹಿಂದೆ ಅವರು ಹೀಗೆ ನಡೆದುಕೊಂಡು ಆಧುನಿಕರಲ್ಲಿ ಆಧುನಿಕರಾದರು. ಹಾಗೆ ನೋಡಿದರೆ, ವಿಜ್ಞಾನಯುಗ, ವಿಚಾರಯುಗ ಎಂದು ನಾವು ಕರೆಯುವ ಈ ದಿನಗಳಲ್ಲೂ ಎಷ್ಟು ಜನ ಸಂಪ್ರದಾಯಸ್ಥರು ಹೀಗೆ ಮಾಡಬಲ್ಲರು ಎಂಬುದನ್ನು ಒಳಹೊಕ್ಕು ನೋಡಿದಾಗ ಶ್ರೀಮಾತೆಯ ಪ್ರಾಯೋಗಿಕ ವೈಚಾರಿಕತೆ ನಮ್ಮನ್ನು ಚಕಿತಗೊಳಿಸುವುದಿಲ್ಲವೆ?

ಒಬ್ಬಾಕೆ ತನ್ನ ಹೆಣ್ಣುಮಕ್ಕಳ ವಿಷಯದಲ್ಲಿ ಶಾರದಾದೇವಿಯವರ ಸಲಹೆ ಕೇಳಿದಾಗ ಅವರು ಕೊಟ್ಟ ಉತ್ತರ: 'ನಿನ್ನ ಮಕ್ಕಳನ್ನು ಶಾಲೆಗೆ ಕಳುಹಿಸು. ಅವರು ಓದಿ ವಿದ್ಯಾವಂತರಾಗಲಿ!' ನಿವೇದಿತಾ ಎಂಬ ಪಾಶ್ಚಾತ್ಯ ಮಹಿಳೆ, ಸ್ವಾಮಿ ವಿವೇಕಾನಂದರ ಶಿಷ್ಯೆ. ಹೆಣ್ಣುಮಕ್ಕಳಿಗೆ ಎಂದು ಶಾಲೆ ತೆರೆದಾಗ ಆ ಶಾಲೆಗೆ ಐದಾರು ಶಿಷ್ಯೆಯರನ್ನು ಕೂಡಿಹಾಕುವುದೂ ಅತ್ಯಂತ ಕಷ್ಟವಾಗಿದ್ದ ದಿನಗಳು ಅವು. ಹೆಣ್ಣು ಮಕ್ಕಳು ವಿದ್ಯೆ ಕಲಿಯಲೇಕೂಡದು ಎಂದು ಇಡೀ ಭರತಖಂಡದ ಜನ, ಅದರಲ್ಲೂ ನಾಗರಿಕತೆಯ ಮುಂಚೂಣಿಯಲ್ಲಿದ್ದ ಕಲ್ಕತ್ತೆಯ ಜನ ನಂಬಿ, ಆ ನಂಬಿಕೆಯನ್ನು ಆಚರಣೆಗೆ ತಂದಿದ್ದ ದಿನಗಳು ಅವು. ಅಂಥ ಪರಿಸರದಲ್ಲಿ ಬಾಳುತ್ತಿದ್ದ ಶಾರದಾದೇವಿಯವರು, ತಮಗೇ ಶಾಲೆಯ ಸುಖ

**ಶ್ರೀಶಾರದಾದೇವಿಯವರು ಪತಿಯೇ ಪರ ದೈವವೆಂದು ನಂಬಿದ ಸಂಪ್ರದಾಯಸ್ಥ ಹಿಂದೂ ಮಹಿಳೆಯಾದರೂ ಆಧುನಿಕರಲ್ಲಿ ಆಧುನಿಕರಾಗಿದ್ದರು. ಅವರ ಪ್ರಾಯೋಗಿಕ ವೈಚಾರಿಕತೆ ನಮ್ಮನ್ನು ಚಕಿತಗೊಳಿಸುತ್ತದೆ**

ಕಾಣಲು ಅಸಾಧ್ಯವಾಗಿದ್ದ ದಿನಗಳಲ್ಲಿ ಬಾಲ್ಯವನ್ನು ಕಳೆದವರು, ತಮ್ಮನ್ನು ಪ್ರಶ್ನಿಸಿದ ಮಹಿಳೆಗೆ ತನ್ನ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸಿ ವಿದ್ಯಾವಂತರನ್ನಾಗಿ ಮಾಡಬೇಕು ಎಂದು ತಿಳಿಯಹೇಳುತ್ತಿದ್ದಾರೆ! ಹೀಗೆ ಹೇಳಿ ಅವರು ಆಧುನಿಕ ಕಾಲದ ಸ್ತ್ರೀ ವಿದ್ಯಾಭ್ಯಾಸ ಚಳುವಳಿಯ ಮುಂಚೂಣಿಯಲ್ಲಿ ಕಾಣಿಸಿಕೊಳ್ಳುವುದಿಲ್ಲವೆ?

### ಅಲೌಕಿಕ ವ್ಯಕ್ತಿತ್ವ

ಇನ್ನು ಅವರ ಲೌಕಿಕತೆ-ಅಲೌಕಿಕತೆಯ ಪ್ರಶ್ನೆ. ಅವರ ಪತಿ ಶ್ರೀ ರಾಮಕೃಷ್ಣರನ್ನು ಅವರ ಶಿಷ್ಯವೃಂದದವರೂ, ಭಕ್ತರೂ, ಅನೇಕ ವಿದ್ವಾಂಸರೂ ಪರಮಾತ್ಮನ ಅವತಾರ ಎಂದು ಭಾವಿಸಿದ್ದರು. ಸ್ವಾಮಿ ವಿವೇಕಾನಂದರು ಅವರನ್ನು 'ಅವತಾರವರಿಷ್ಠ' ಎಂದರೆ ಉತ್ತಮೋತ್ತಮ ಅವತಾರ ಎಂದು ವರ್ಣಿಸಿದರು. ಅಂಥವರು ಶ್ರೀಮಾತೆಯನ್ನು ದೇವಿಯೆಂದು ಭಾವಿಸಿ ವಿಧ್ಯುಕ್ತವಾಗಿ ಪೂಜಿಸಿದರು. ಇಷ್ಟರಿಂದಲೇ ಅವರು ಜಗನ್ಮಾತೆಯ ಸ್ವರೂಪ ಅಥವಾ ಅವತಾರ ಎಂಬುದು ಸಿದ್ಧವಾಗುತ್ತದೆಯೆ? ಶಾರದಾದೇವಿಯವರನ್ನು ನಾವು ಹೆಚ್ಚಾಗಿ ಕಾಣುವುದು ಸಂಸಾರದ ನಾನಾ ಕಷ್ಟಗಳ ನಡುವೆ. ಬಾಲ್ಯ ವಿವಾಹ, ಅನಂತರ ದೈವೀ ಭಾವದಲ್ಲಿ ಮುಳುಗಿ ಹೋಗಿದ್ದ ಪತಿಯ ಮರವೆಗೆ ಪಾತ್ರರಾಗಿದ್ದು, ಅನಂತರ ಅವರಿಂದ ಸ್ವೀಕೃತರಾದಾಗಲೂ ಮರೆಯಲ್ಲೇ ಇದ್ದು ಹಗಲೂ ರಾತ್ರಿ ಅವರ ಊಟೋಪಚಾರಗಳನ್ನೂ, ಬೇಕುಬೇಡಗಳನ್ನೂ ನೋಡಿಕೊಳ್ಳುತ್ತಿದ್ದುದರಲ್ಲಿ ತೊಡಗಿದ್ದುದು, ಪತಿಯ ಮರಣಾನಂತರ ಕಾಮಾರಪುಕುರ, ಜಯರಾಮವಟಿ ಎಂಬ ಕುಗ್ರಾಮಗಳಲ್ಲಿ ಅತ್ಯಂತ ಬಡತನದ, ಕಷ್ಟಪರಂಪರೆಗಳ ನಡುವೆ ಬಾಳಿದ್ದು, ಜನ್ಮ ಜನ್ಮದ ಶತ್ರುಗಳಿಗೆ ಕೂಡ ಇಂಥ ಬಂಧುಗಳಿರಲಿ ಎಂದು ನಾವು ಬಯಸದ ನೆಂಟರ ಕಾಟ – ಇವನ್ನೆಲ್ಲ ಅನುಭವಿಸಿ ಅವುಗಳಲ್ಲಿ ಯಾವುದಕ್ಕೂ ಪರಿಹಾರವನ್ನು ಕಾಣದೆ ಹೋದ ಶಾರದಾದೇವಿಯವರು ದೇವೀ ಸ್ವರೂಪಿಯೇ ಅಥವಾ ಸಾಕ್ಷಾತ್ ದೇವಿಯ ಅವತಾರವೆ? ಇದಕ್ಕೆ ಎಲ್ಲರೂ ಒಪ್ಪಿಕೊಳ್ಳುವಂತಹ ಉತ್ತರ ಹೇಳುವುದು ಕಷ್ಟ. ಎಂಥ ವಿಷಮ ಪರೀಕ್ಷೆಗಳ ನಡುವೆಯೂ ಅವನ್ನು ಸಾವಧಾನವಾಗಿ, ಶಾಂತ ಚಿತ್ತದಿಂದ ಎದುರಿಸುವ ಶಕ್ತಿ ಅವರಿಗಿತ್ತು ಎಂಬುದೂ ನಿಜ. ಕಷ್ಟಗಳು ಅವರಿಗೆ ಬೆಟ್ಟಗಳಂತೆ ಬಂದದ್ದು ಹೌದು, ಆದರೆ ಮಾತ್ರ ಅವು ಮಂಜಿನಂತೆ ಕರಗಿ ಹೋಗಲಿಲ್ಲ. ಕಷ್ಟಗಳ ಮಂಜಿನ ಗುಡ್ಡೆಗಳು, ತಾವಾಗಿಯೇ ಕರಗಿಹೋಗುವಂತಹವು ಎಂಬ ಮನಸ್ಥಿತಿಯಲ್ಲಿ ಅವರಿದ್ದರು.

ತಮ್ಮದು ಅಲೌಕಿಕವಾದ ವ್ಯಕ್ತಿತ್ವ, ತಾವು ಮಾನವ ಮಾತ್ರರಲ್ಲ ದೈವೀಭಾವ ತಮ್ಮ ನಿಜವಾದ ಸ್ವರೂಪ ಎಂಬ ಭಾವನೆ ಆಗಾಗ ಅವರಲ್ಲಿ ಸ್ಫುರಣವಾಗುತ್ತಿತ್ತು ಎಂಬುದಕ್ಕೆ ಅವರ ಬದುಕಿನಲ್ಲಿ ನಿದರ್ಶನಗಳು ದೊರೆಯುತ್ತವೆ. ಒಮ್ಮೆ ಅವರು ತರಕಾರಿ ಹೆಚ್ಚುತ್ತಾ ಕುಳಿತಿದ್ದಾಗ ಭಕ್ತೆಯೊಬ್ಬರು ಕೇಳಿದರಂತೆ: 'ಅಮ್ಮ, ನಿಮ್ಮನ್ನು ಜಗನ್ಮಾತೆಯ ಸ್ವರೂಪ ಎನ್ನುತ್ತಾರೆ, ಅಂಥದರಲ್ಲಿ ನಿಮ್ಮನ್ನು ಹೀಗೇಕೆ ಕಾಣುತ್ತಿದ್ದೇವೆ?' ಅದಕ್ಕೆ ಶ್ರೀಮಾತೆಯವರು, 'ಮಾಯೆಯಲ್ಲವೆ, ಮಗು' ಎಂದು ಉತ್ತರ ಕೊಟ್ಟರು ಎಂದು ಹೇಳಲಾಗಿದೆ.

ಇನ್ನೊಂದು ಪ್ರಸಂಗ. ಇದು ಎಲ್ಲಾದರೂ ದಾಖಲಾಗಿದೆಯೋ ಇಲ್ಲವೋ ತಿಳಿಯದು. ಆದರೆ ಈ ಲೇಖಕನು ಒಮ್ಮೆ ಆಲ್ಮೋರಾಕ್ಕೆ ಹೋಗಿದ್ದಾಗ ಕೇಳಿದ್ದು. ಬೋಶಿ ಸೇನ್ ಎನ್ನುವ ಬಹುದೊಡ್ಡ ಸಸ್ಯವಿಜ್ಞಾನಿಯ ದರ್ಶನ ಮಾಡಲು ನಾನು ಆಲ್ಮೋರದ ರಾಮಕೃಷ್ಣ ಆಶ್ರಮದ ಸಂನ್ಯಾಸಿಯೊಬ್ಬರ ಜೊತೆ ಹೋಗಿದ್ದೆ. ಬೋಶಿ ಸೇನ್ ಪರಮಹಂಸರ ಭಕ್ತರು. ಅವರ ಅಮೆರಿಕನ್ ಪತ್ನಿಯೂ ಭಕ್ತರು. ಸ್ವಾಮಿ ವಿವೇಕಾನಂದರು ಆಲ್ಮೋರಕ್ಕೆ ಭೇಟಿಕೊಟ್ಟಿದ್ದಾಗ ಬಳಸುತ್ತಿದ್ದ ಆಳೆತ್ತರದ ದಂಡ ಸೇನರ ಮನೆಯಲ್ಲಿದೆ. ಬಾಲ್ಯದಲ್ಲಿ ಸೇನ್ ಅವರು ಶ್ರೀಮಾತೆಯವರನ್ನು ಕಂಡಿದ್ದರು. ಕೋಯಲ್‌ಪಾರಾ ಎಂಬ ಹಳ್ಳಿಯಲ್ಲಿದ್ದ ಬೋಶಿ ಸೇನ್ ಅವರ ಮನೆಯಲ್ಲಿ ಶ್ರೀಮಾತೆಯವರು ಆಗಾಗ ತಂಗುತ್ತಿದ್ದರು.

ಒಮ್ಮೆ ಶ್ರೀಮಾತೆಯವರು ತಮ್ಮ ಪರಿವಾರ ಸಮೇತ ಹಾಗೆ ತಂಗಲು ಬಂದಾಗ ಬೋಶಿ ಸೇನ್ ಅವರ ಮನೆಯವರೆಲ್ಲ ಬೇರೊಂದು ಊರಿಗೆ ಹೊರಡುವ ಸಿದ್ಧತೆಯಲ್ಲಿದ್ದರು. ಶ್ರೀಮಾತೆ ಸೇನರ ಮನೆಯವರನ್ನು 'ಎಲ್ಲಿಗೆ ಹೊರಟಿದ್ದೀರಿ?' ಎಂದು ಕೇಳಿದರಂತೆ. ಮನೆಯವರು: 'ಇಂಥ ಊರಿನಲ್ಲಿ ದುರ್ಗಾಪೂಜೆ ತುಂಬ ವೈಭವದಿಂದ ನಡೆಯುತ್ತದೆ, ನೋಡಲು ಹೋಗುತ್ತಿದ್ದೇವೆ' ಎಂದು ಉತ್ತರಿಸಿದರಂತೆ. ಶ್ರೀಮಾತೆಯವರ ಮುಖದಲ್ಲಿ ಮೂಡಿದ ಮಂದಹಾಸ ಅಪೂರ್ವವಾದದ್ದು ಎಂದು ಮನೆಯವರಿಗೆಲ್ಲ ಭಾಸವಾಯಿತಂತೆ. ಅದಕ್ಕಿಂತ ಅಪೂರ್ವವಾದದ್ದು ಶ್ರೀಮಾತೆಯವರು ಹೇಳಿದ ಮಾತುಗಳು: 'ನಾನೇ ಇಲ್ಲಿಗೆ ನಾನಾಗಿ ಬಂದಿದ್ದೇನೆ. ನೀವು ದುರ್ಗಾಪೂಜೆಯನ್ನು ನೋಡಲು ಇನ್ನೊಂದು ಊರಿಗೆ ಹೊರಟಿದ್ದೀರಿ!' ಮೇಲಿನ ಘಟನೆಯನ್ನು ನಿರೂಪಿಸಿ ಬೋಶಿ ಸೇನ್ ಹೇಳಿದರು, 'ನಮ್ಮ ಮನೆಯ ಹಿರಿಯರಿಗೆ ಶ್ರೀಮಾತೆಯವರ ಮಾತುಗಳಿಂದ ಸಾಕ್ಷಾತ್ ಜಗನ್ಮಾತೆಯೇ ತಮ್ಮ ಮನೆಗೆ ಬಂದಿದ್ದಾರೆ ಎಂಬುದು ಖಚಿತವಾದ ಅನುಭವವಾಗಿ ಅವರು ಪರಸ್ಥಳಕ್ಕೆ ಹೊರಡುವುದನ್ನು ರದ್ದುಮಾಡಿ ಶ್ರೀಮಾತೆಯ ಸೇವೆಗೆ ನಿಂತರು.'

### ಮಾನವೀಯ ಗುಣ

ಕೆಲವು ಮಾನವೀಯ ಗುಣಗಳುಂಟು. ಅವು ಪರಿಷ್ಕಾರಗೊಂಡು ದೈವೀಗುಣಗಳಾಗಬೇಕು. ಹಾಗಾಗದೆ ಸುರಕ್ಷಿತವಾದ

ಕೆಲವು ಮಾನವೀಯ ಗುಣಗಳುಂಟು. ಅವು ಪರಿಷ್ಕಾರಗೊಂಡು ದೈವೀಗುಣಗಳಾಗಬೇಕು. ಹಾಗಾಗದೆ ಸುರಕ್ಷಿತವಾದ ಒಂದು ಸಮಾಜ ವ್ಯವಸ್ಥೆ ಏರ್ಪಡುವುದು ಸಾಧ್ಯವಿಲ್ಲ.

ಒಂದು ಸಮಾಜ ವ್ಯವಸ್ಥೆ ಏರ್ಪಡುವುದು ಸಾಧ್ಯವಿಲ್ಲ. ಅವುಗಳಲ್ಲಿ ತುಂಬ ಮುಖ್ಯವಾದದ್ದು ನಮ್ಮ ಮನಸ್ಸನ್ನು ಶುದ್ಧವಾಗಿಟ್ಟುಕೊಳ್ಳುವುದು. ಅಷ್ಟೇ ಮುಖ್ಯವಾದದ್ದು ಇತರರಲ್ಲಿ ದೋಷಗಳನ್ನು ಕಾಣದೇ ಇರುವುದು. ಮೊದಲನೆಯ ಸ್ಥಿತಿಗಾಗಿ ಶ್ರೀಮಾತೆ ದೇವರನ್ನು ಹೀಗೆ ಪ್ರಾರ್ಥಿಸುತ್ತಿದ್ದರಂತೆ: 'ಚಂದ್ರನಲ್ಲೂ ಕಲೆಗಳುಂಟು. ನನ್ನ ಮನಸ್ಸಿನಲ್ಲಿ ಯಾವ ದೋಷಗಳೂ ಇರದಂತೆ ಮಾಡು.' ಅವರೇ ದೇವರಾದರೆ ದೇವರನ್ನು ಏಕೆ ಪ್ರಾರ್ಥಿಸುತ್ತಿದ್ದರು? ಇದಕ್ಕೆ ಉತ್ತರ ಇಲ್ಲ. ಮತ್ತೊಂದು ಪ್ರಶ್ನೆಯೇ ಅದಕ್ಕೆ ಉತ್ತರ. ಮನ್ಮಥನನ್ನು ಸುಟ್ಟು ಬೂದಿ ಮಾಡಿದ ಮೇಲೆ ಶಿವ ಮತ್ತೆ



ರಾಮಕೃಷ್ಣ ಸಂಘದ ಕೆಲವು ಸ್ವಾಮಿಗಳು ಬಂಗ್ಲಾದೇಶದ ಪ್ರದೇಶವೊಂದರಲ್ಲಿ ಕ್ಷಾಮ ಪರಿಹಾರ ಕಾರ್ಯವನ್ನು ನಡೆಸುತ್ತಿದ್ದರು. ಒಮ್ಮೆ ಅವರು ಟೀ ಕುಡಿಯಲು ಮುಸ್ಲಿಂ ಟೀಅಂಗಡಿಗೆ ಹೋದರು. ಅಂಗಡಿಯ ಗೋಡೆಯ ಮೇಲಿದ್ದ ಚಿತ್ರವೊಂದು ಅವರ ಗಮನ ಸೆಳೆಯಿತು. ಆಶ್ಚರ್ಯಾನಂದಗಳಿಂದ ಅದನ್ನೆ ನೋಡುತ್ತ ಕುಳಿತರು. ಈ ಮುಸ್ಲಿಂ ಅಂಗಡಿಯಲ್ಲಿ ಈ ಚಿತ್ರ ಹೇಗೆ ಬಂತು ಎಂದು ಕುತೂಹಲ ಅವರಿಗೆ . ಟೀ ಕುಡಿದಾದ ಮೇಲೆ ಆ ಮುಸ್ಲಿಮನನ್ನು ಸಂಧಿಸಿ, 'ಆ ಚಿತ್ರದಲ್ಲಿ ಕಾಣಿಸುವ ಮಹಿಳೆ ಯಾರು?' ಎಂದು ವಿಚಾರಿಸಿದರು. ಆತ 'ನನಗೆ ತಿಳಿಯದು' ಎಂದು ಉತ್ತರಿಸಿದ. ಈ ಉತ್ತರ ಆ ಸ್ವಾಮಿಗಳ ಕುತೂಹಲವನ್ನು ಇನ್ನೂ ಕೆರಳಿಸಿತು. ' ಮತ್ತೆ ಏತಕ್ಕಾಗಿ ಆ ಚಿತ್ರವನ್ನು ಇಟ್ಟುಕೊಂಡಿರುವೆ ?' ಎಂದು ಅವರು ಪ್ರಶ್ನಿಸಿದರು. ಆಗ ಅವನು ಆ ಚಿತ್ರದ ಹಿಂದಿರುವ ಕಥೆಯನ್ನು ವಿವರಿಸಿದ. ಅವನು ಒಮ್ಮೆ ಬೀದಿಯಲ್ಲಿ ಹೋಗುತ್ತಿರುವಾಗ ದಾರಿಯಲ್ಲಿ ಒಂದು ಕಾಗದ ಬಿದ್ದಿತ್ತು, ಅದರಲ್ಲಿ ಒಂದು ಮಹಿಳೆಯ ಚಿತ್ರವಿತ್ತು. ಆತ ಅದನ್ನು ಎತ್ತಿ ಕಾಗದವನ್ನು ಸರಿಯಾಗಿ ಬಿಡಿಸಿ ಚಿತ್ರವನ್ನು ನಿಟ್ಟಿಸಿ ನೋಡಿದನು. ನೋಡುನೋಡುತ್ತಿದ್ದಂತೆಯೇ ಅವನಲ್ಲಿ ಅವರ್ಣನೀಯವಾದ ಆನಂದ ಭಾವ ಕೆರಳಿತು. ತನ್ನ ತಾಯಿಯನ್ನೇ ನೋಡುತ್ತಿರುವಂತೆ ಅವನಿಗನಿಸಿತು. ಅವನು ಅದನ್ನು ತನ್ನ ಹೃದಯಕ್ಕೆ ಅಪ್ಪಿಕೊಂಡು ಕಣ್ಣೀರು ಸುರಿಸಿದನು. ಅನಂತರ ಅದಕ್ಕೆ ಒಂದು ಸುಂದರ ಕಟ್ಟನ್ನು ಹಾಕಿಸಿ ತನ್ನ ಟೀ ಅಂಗಡಿಯ ಗೋಡೆಯ ಮೇಲೆ ತಗಲಿಹಾಕಿದನು. ಈ ವೃತ್ತಾಂತವನ್ನು ಹೇಳುತ್ತ ಅವನು ಭಾವಪರವಶತೆಯಿಂದ ಕಣ್ಣೀರು ಸುರಿಸಿದನು. ಅನಂತರ ಆ ಸ್ವಾಮಿಗಳು ಆ ಭಾವಚಿತ್ರ ಶ್ರೀಮಾತೆ ಶಾರದಾದೇವಿಯವರದೆಂದು ಹೇಳಿ ಅವರ ಪರಿಚಯವನ್ನು ಅವನಿಗೆ ಮಾಡಿಸಿ ಅಂಗಡಿಯಿಂದ ಹೊರಬಂದರು.

ತಪಸ್ಸಿಗೆ ಕುಳಿತ ಎಂದು ಹೇಳಿದ್ದಾರೆ. ಎಲ್ಲರ ತಪಸ್ಸಿನ ಮೂರ್ತಿಯಾದ ಶಿವನಿಗೆಂತಹ ತಪಸ್ಸು?

ಎರಡನೆಯ ಮಾನವೀಯ ಗುಣ ಇತರರ ದೋಷಗಳನ್ನು ಕಾಣದೇ ಹೋಗುವುದು. 'ನೀನು ಶಾಂತಿಯನ್ನು ಪಡೆಯಬೇಕಾದರೆ ಇತರರ ದೋಷಗಳನ್ನು ನೋಡಬೇಡ, ಬದಲಿಗೆ ನಿನ್ನದೇ ದೋಷಗಳನ್ನು ನೋಡಿಕೋ'—ಇದು ಶಾರದಾದೇವಿಯವರು ನೀಡುತ್ತಿದ್ದ ಉಪದೇಶರತ್ನಗಳಲ್ಲಿ ಅತ್ಯಂತ ಅಮೂಲ್ಯವಾದದ್ದು ಎಂಬುದು ನನ್ನ ಭಾವನೆ. ಶ್ರೀಮಾತೆಯವರಿಗೆ ಅದು ಉಪದೇಶ ಮಾತ್ರವಾಗಿರಲಿಲ್ಲ, ಅವರ ಸಹಜವಾದ ಮನಸ್ಥಿತಿಯಾಗಿತ್ತು. ಅದನ್ನು ಸಾಧಿಸಿದ್ದವರನ್ನು ದೇವತೆ ಎಂದು ಹೇಳುವುದಕ್ಕೆ ಸ್ವಲ್ಪವೂ ಹಿಂಜರಿಯಬೇಕಾಗಿಲ್ಲ.

ಇತರರ ಕಷ್ಟಗಳಿಗಾಗಿ ಕರಗಿದವರು ಅವರು. ಸ್ವಾಮಿ ವಿವೇಕಾನಂದರೆ ಮೊದಲಾದ ಶ್ರೀರಾಮಕೃಷ್ಣ ಶಿಷ್ಯಕೋಟಿಯಿಂದ ಪ್ರಣಾಮಗಳನ್ನು ಸ್ವೀಕರಿಸಿದಂತೆಯೇ ತೀರ ಸಣ್ಣ ಜನರಿಂದ, ದುರಾಸೆಯ ಸ್ವಭಾವದ ಬಂಧುಗಳಿಂದ ಟೀಕೆ ಟಿಪ್ಪಣಿಗಳನ್ನೂ ಕಿರುಕುಳಗಳನ್ನೂ ಸ್ವೀಕರಿಸಿದರು. ಪ್ರಣಾಮಗಳೂ ಕಿರುಕುಳಗಳೂ ಒಂದೇ ಎಂಬ ಸಮದೃಷ್ಟಿಯನ್ನು ಸಹಜ ಸ್ವಭಾವವನ್ನಾಗಿ ಮಾಡಿಕೊಂಡವರು ಅವರು. ಆ ಎಲ್ಲ ಕಾರಣಗಳಿಗಾಗಿ ಎಲ್ಲರ ಪ್ರಣಾಮಗಳಿಗೆ ಅರ್ಹರಾದವರು.

ಒಂದು ಕಡೆ ಶ್ರೀರಾಮಕೃಷ್ಣ ಪರಮಹಂಸರು, ಮತ್ತೊಂದು ಕಡೆ ಸ್ವಾಮಿ ವಿವೇಕಾನಂದರೆ ಮೊದಲಾದ ಶಿಷ್ಯಕೋಟಿ ಇವೆರಡು ದಡಗಳ ನಡುವೆ ಶಾಂತವಾಗಿ ಹರಿಯುತ್ತಾ ಸುತ್ತಣ ನೆಲಕ್ಕೆ ಸಮೃದ್ಧಿಯನ್ನು, ಕಣ್ಣಿಗೆ ಹಸುರಿನ ತಂಪನ್ನು ನೀಡುವ ನಿರ್ಮಲ ಪ್ರವಾಹದಂತೆ ಗೋಚರಿಸುತ್ತಾರೆ, ಶ್ರೀಮಾತೆ ಶಾರದಾದೇವಿಯವರು.



# ವೇದಗಳಲ್ಲಿ ಸಮಷ್ಟಿಪ್ರಜ್ಞೆ

ಡಾ. ಹೆಚ್.ರಾಮಚಂದ್ರ ಸ್ವಾಮಿ

## ವೇದಕಾಲದ ಪ್ರಶ್ನೆಗಳು

ನಾವು ನಮ್ಮ ಪಂಚೇಂದ್ರಿಯಗಳಿಂದ ಗ್ರಹಿಸಿ ಅನುಭವ ಪಡುತ್ತಿರುವ ಈ ನಮ್ಮ ಪರಿಸರ, ಈ ವಿಶ್ವ ಹೇಗೆ ಉಂಟಾಯಿತು? ಅದರ ಉದ್ದೇಶವೇನು? ಈ ವಿಶ್ವ ಏಕೆ ಹೀಗಿದೆ? ಈ ವಿಶ್ವಕ್ಕೂ ನಮಗೂ ಏನು ಸಂಬಂಧ? ಇಷ್ಟಕ್ಕೂ ನಾವು ಯಾರು, ಎಲ್ಲಿಂದ ಬಂದೆವು? ನಮ್ಮ ಹಾಗೂ ವಿಶ್ವದ ಅಸ್ತಿತ್ವಕ್ಕೆ ಅರ್ಥವೇನಾದರೂ ಇದೆಯೆ? ನೋಡನೋಡುತ್ತಿರುವಂತೆಯೇ ಭೂಕಂಪವಾಗುತ್ತದೆ, ಹತ್ತಾರು ಸಾವಿರ ಜನರು ನಿಮಿಷಮಾತ್ರದಲ್ಲಿ ಸಾಯುತ್ತಾರೆ. ದೇವರ ಗುಡಿಯ ಆಶ್ರಯಕ್ಕೆ ಹೋದವರನ್ನೂ ಸಿಡಿಲು ಹೊಡೆದು ಕೊಲ್ಲುತ್ತದೆ. ಚಂಡಮಾರುತ ಬೀಸಿ ಇದ್ದಕ್ಕಿದ್ದ ಹಾಗೆ ಸಮುದ್ರ ಉಕ್ಕೇರಿ ಹತ್ತಿಪ್ಪತ್ತು ಮೀಟರ್ ಎತ್ತರದ ಅಲೆಗಳು ಅಪ್ಪಳಿಸಿ ಸಾವಿರಗಟ್ಟಲೆ ಜನರು ರಾತ್ರಿ ಕಳೆದು ಬೆಳಗಾಗುವುದರೊಳಗೆ ನಿರ್ನಾಮವಾಗಿರುತ್ತಾರೆ. ಏಕೆ ಹೀಗಾಗುತ್ತದೆ? ಯಾವುದು ಶಾಶ್ವತ? ಈ ವಿಶ್ವದಲ್ಲಿ ನಾವು ನೆಮ್ಮಿಕೊಳ್ಳಬಹುದಾದ ಶಾಶ್ವತ ಎಂಬುದೇನಾದರೂ ಇದೆಯೆ? ಇವು ಇಂದಿನ ವಿಜ್ಞಾನದ ತತ್ತ್ವಮೀಮಾಂಸೆಯ ಪ್ರಶ್ನೆ ಗಳಾಗಿರುವಂತೆಯೇ ವೇದಗಳ ಕಾಲದ ಪ್ರಶ್ನೆಗಳೂ ಆಗಿದ್ದುವು.

ವೇದಗಳ ಅತಿಗಂಭೀರ ತಾತ್ತ್ವಿಕ ಭಾವನೆಗಳನ್ನು ಆಧುನಿಕ ವಿಜ್ಞಾನದ ಹಿನ್ನಲೆಯಲ್ಲಿ ನಿರೂಪಿಸಿರುವ ಡಾ. ಹೆಚ್. ರಾಮಚಂದ್ರಸ್ವಾಮಿಯವರು ಶೃಂಗೇರಿಯ J.C.B.M. ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದಾರೆ. ಪರಿಸರದ ವಿಷಯದಲ್ಲಿ ವಿಶೇಷ ಸಂಶೋಧನೆಗಳನ್ನು ನಡೆಸಿರುವ ಅವರು ಬ್ರಿಟಿಷ್ ಈಕಲಾಜಿಕಲ್ ಸೊಸೈಟಿಯ ಸದಸ್ಯರಾಗಿರುತ್ತಾರೆ.

ಇಂಥ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದಕ್ಕೆ ಮೊದಲು ವಿಶ್ವದ ಚಿತ್ರವೊಂದು ನಮಗೆ ಅಗತ್ಯವಾಗುತ್ತದೆ. ಅದು ಚಪ್ಪಟೆಯಾದ ಭೂಮಿಗೆ ತನ್ನ ಬೆನ್ನಿನ ಮೇಲೆ ಆಧಾರ ಕೊಟ್ಟು ಎತ್ತಿ ಹಿಡಿದ ಕೂರ್ಮಾವತಾರದ ಚಿತ್ರವಾಗಿರಬಹುದು; ಅಥವಾ ಇಂದಿನ ಕಾಸ್ಮಾಲಜಿ(ವಿಶ್ವ ವಿಜ್ಞಾನ)ಯ **ಸೂಪರ್‌ಸ್ಟ್ರಿಂಗ್** ಸಿದ್ಧಾಂತವಾಗಿರಬಹುದು. ಎರಡೂ ವಿಶ್ವಸಿದ್ಧಾಂತಗಳೇ — ಆದರೆ ಎರಡನೆಯದು ಹೊಸತು, ಗಣಿತದ ಭದ್ರತರ್ಕದ ನೆಲೆಯಲ್ಲಿ ವೈಜ್ಞಾನಿಕವಾಗಿ ಸ್ಥಾಪಿತವಾಗಿರುವಂಥದು. ಕೂರ್ಮಾವತಾರದ ಮಹಾವಿಷ್ಣುವನ್ನಾಗಲೀ, ಸ್ಟೀಫನ್ ಹಾಕಿನ್ಸ್‌ನ ಸೂಪರ್ ಸ್ಟ್ರಿಂಗ್‌ನ್ನಾಗಲೀ ನೋಡಿದವರು ಯಾರೂ ಇಲ್ಲ. ಆದರೂ, ಜನರು ಭೂಮಿಯ ಅಂಚಿನಿಂದ ಕೆಳಕ್ಕೆ ಬಿದ್ದು ಹೋಗುವುದು ನಮ್ಮ ಅನುಭವಕ್ಕೆ ಬಂದಿಲ್ಲವಾದ್ದರಿಂದ ಆ ಹಳೆಯ ಚಿತ್ರ ನಮ್ಮ ನಂಬಿಕೆಯನ್ನು ಕಳೆದುಕೊಳ್ಳುತ್ತದೆ.

## ವಿಶ್ವನಿಯಮಗಳು

ವಿಶ್ವವನ್ನು ವಿವರಿಸಹೊರಟ ಹಳೆಯಕಾಲದ ಪ್ರಯತ್ನಗಳು ಈ ಪ್ರಪಂಚದ ಆಗುಹೋಗುಗಳನ್ನು ನಿಯಂತ್ರಿಸುವವರು ಅಗೋಚರವಾದ ದೈವಗಳು ಎಂದು ಕಲ್ಪಿಸಿಕೊಂಡಿದ್ದವು. ಚಂದ್ರಸೂರ್ಯರಂಥ ಆಕಾಶಕಾಯಗಳ ಚಲನೆಗೆ, ನದಿಗಳು ಪರ್ವತಗಳಂಥ ತಿರ್ಯಕ್ ವಸ್ತುಗಳ ಆಗುಹೋಗುಗಳಿಗೆ ಈ ಅಧಿದೇವತೆಗಳೇ ಕಾರಣ ಎಂದು ವೇದಗಳ ಕಾಲದ ಋಷಿಗಳು ನಂಬಿದ್ದರು. ಮಳೆ ಬೆಳೆಗಳೆಲ್ಲ ಚೆನ್ನಾಗಿದ್ದು, ಭೂಮಿ ಫಲವತ್ತಾಗಿದ್ದು, ಹಸುಗಳು ಹಾಲುಕರೆಯುತ್ತಿದ್ದು ಮತ್ತು ಬದುಕು ನೆಮ್ಮದಿಯಿಂದಿರಬೇಕಾದರೆ ಈ ಅಧಿದೇವತೆಗಳನ್ನು ಪೂಜಿಸುವುದು ಮತ್ತು ಅವರುಗಳ ನಿರಂತರ ಅನುಗ್ರಹಕ್ಕೆ ಪಾತ್ರರಾಗಿರುವುದು ಅಗತ್ಯ ಎಂದು ಭಾವಿಸಿದ್ದರು. ಕ್ರಮೇಣ ಒಂದೊಂದೇ ವಿಶ್ವನಿಯಮಗಳು ಋಷಿಗಳ ಗಮನವನ್ನು ಸೆಳೆದವು : ಅರ್ಘ್ಯ ಕೊಡಲಿ ಬಿಡಲಿ ಸೂರ್ಯ ಪೂರ್ವಕ್ಕೇ ಹುಟ್ಟಿ ಪಶ್ಚಿಮಕ್ಕೇ ಮುಳುಗುವುದು ; ಚಂದ್ರನೂ ಗ್ರಹಗಳೂ ಆಕಾಶದಲ್ಲಿ— ಮುಂದಾಗಿಯೇ ಲೆಕ್ಕಾಚಾರ ಮಾಡಿಬಿಡಬಹುದಾದಷ್ಟು ನಿಖರವಾಗಿ — ಗೊತ್ತಾದ ರೀತಿಯಲ್ಲಿ, ಗೊತ್ತಾದ ಮಾರ್ಗದಲ್ಲಿ ಚಲಿಸುವುದು ಇತ್ಯಾದಿ. ಚಂದ್ರಸೂರ್ಯರು ಆಗಲೂ ದೇವತೆಗಳೇ, ನಿಜ; ಆದರೆ ವಿಶ್ವ ನಿಯಮಗಳನ್ನು ಎಂದೆಂದಿಗೂ ಮೀರದ ದೇವತೆಗಳು, ಋತ ಮಾರ್ಗವನ್ನು ಚಾಚೂ ತಪ್ಪದವರು.

ಮೊದಮೊದಲು ಈ ವಿಶ್ವನಿಯಮಗಳು ಮನುಷ್ಯನ ಗಮನವನ್ನು ಸೆಳೆದದ್ದು ಆಕಾಶಕಾಯಗಳ ವಿಷಯದಲ್ಲಿ ಮಾತ್ರ. ಆದರೆ ನಾಗರಿಕತೆ ಮುಂದುವರೆದಂತೆ, ಅದರಲ್ಲೂ ಕಳೆದ ಮೂರು ಶತಮಾನಗಳಲ್ಲಿ, ವಿಶ್ವದ ಎಲ್ಲಾ ಆಗುಹೋಗುಗಳೂ ಈ ನಿಯಮಗಳನ್ನನುಸರಿಸಿ ನಡೆಯುತ್ತಿವೆ ಎಂಬ ನಂಬಿಕೆ ಬೆಳೆದು ಅದಕ್ಕನುಸಾರವಾಗಿ ಬಹಳಷ್ಟು ಸಂಖ್ಯೆಯಲ್ಲಿ ವಿಶ್ವನಿಯಮಗಳನ್ನು ಕಂಡುಹಿಡಿಯಲಾಯಿತು.

**ಯಾವುದು ಶಾಶ್ವತ? ಈ ವಿಶ್ವದಲ್ಲಿ ನಾವು ನೆಮ್ಮಿಕೊಳ್ಳಬಹುದಾದ ಶಾಶ್ವತ ಎಂಬುದೇನಾದರೂ ಇದೆಯೆ?**

ಇಷ್ಟಾದರೂ ವಿಶ್ವದ ಅಸ್ತಿತ್ವ ಮೊದಲು ಹೇಗಾಯಿತು, ಅಸ್ತಿತ್ವಕ್ಕೆ ಬಂದ ಅದನ್ನು ನಿಯಮಗಳಿಗೊಳಪಡಿಸಿ ಮುನ್ನಡೆಯುವಂತೆ ಮಾಡಿದ್ದು ಯಾರು ಎಂಬುದಕ್ಕೆ ಉತ್ತರ ಸಿಕ್ಕದೆ ಸೃಷ್ಟಿಕರ್ತನಾದ ದೇವರ ಕಲ್ಪನೆಯ ಅಗತ್ಯ ಉಳಿದೇ ಉಳಿಯಿತು. ಹೀಗೆ ಭಗವಂತನಿಂದ ಸೃಷ್ಟಿಸಲ್ಪಟ್ಟು ಒಮ್ಮೆ ಚಾಲನೆಗೆ ಬಂದ ವಿಶ್ವವು, ನಂತರ ಅವನ ಅವಲಂಬನೆಯಿಲ್ಲದೆ ವಿಶ್ವನಿಯಮಗಳ ಪ್ರಕಾರ ಮುನ್ನಡೆಯುತ್ತದೆ ಎಂಬುದು ಹತ್ತೊಂಬತ್ತನೆಯ ಶತಮಾನದ ಮಾನವನ ಕಲ್ಪನೆ.

## ಕ್ವಾಂಟಂ ಸಿದ್ಧಾಂತ

ಆದರೆ ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಆವಿಷ್ಕರಣಗೊಂಡ ಕ್ವಾಂಟಂ ಸಿದ್ಧಾಂತವು ಈ ಕಲ್ಪನೆಯನ್ನೂ ಬದಲಾಯಿಸಿತು. ಇದರ ಪ್ರಕಾರ, ವಸ್ತುವಿನ ಅತ್ಯಂತ ಸಣ್ಣ ಕಣಗಳಿಗೆ ಅನ್ವಯಿಸುವಂತೆ ಸ್ಥಾನವನ್ನಾಗಲೀ ಚಲನೆಯ ವೇಗವನ್ನಾಗಲೀ ಕಂಡುಹಿಡಿಯುವುದು ಸಾಧ್ಯವಿಲ್ಲ; ಬದಲಿಗೆ ಆ ಕಣಗಳನ್ನು ಕಾಲದೊಂದಿಗೆ ಪರಿಣಾಮಹೊಂದಬಹುದಾದ ಶಕ್ತಿಯ ತರಂಗಗಳಾಗಿ ಊಹಿಸಿಕೊಳ್ಳಬಹುದು. ವರ್ತಮಾನದಲ್ಲಿ ತರಂಗವೊಂದು ನಮಗೆ ಗೊತ್ತಿದ್ದರೆ, ಅದರ ಭೂತಕಾಲದ ಸ್ಥಿತಿಯನ್ನೂ ಭವಿಷ್ಯವನ್ನೂ ಸುಲಭವಾಗಿ ಲೆಕ್ಕಾಚಾರ ಮಾಡಬಹುದು. ಅನಿರ್ದಿಷ್ಟತೆ ಬರುವುದು ಅವುಗಳನ್ನು ಗೊತ್ತಾದ ಸ್ಥಾನ ಹಾಗೂ ವೇಗ ಉಳ್ಳ ವಸ್ತುಕಣಗಳಾಗಿ ಊಹಿಸಿದಾಗಲೇ. ವಸ್ತುವೇ ಇಲ್ಲ, ಇರುವುದೆಲ್ಲ ಕೇವಲ ವಿವಿಧ ತರಂಗಗಳೇ ಎಂದು ಒಪ್ಪಿಕೊಂಡಾಗಲೂ ಪ್ರಶ್ನೆ ಉಳಿದೇ ಉಳಿಯುತ್ತದೆ—ವಿಶ್ವದ ಮೂಲಸ್ಥಿತಿ, ಮತ್ತು ಅದು ಮುನ್ನಡೆಯುವುದಕ್ಕೆಂದು ಇರುವ ನಿಯಮಗಳು—ಇವುಗಳಿಗೆ ಕಾರಣರಾರು?

ಕೇವಲ ಆಕರ್ಷಣಗುಣ ಮಾತ್ರ ಇರುವ ಗುರುತ್ವದಿಂದಾಗಿ ವಿಶ್ವವು ಕಾಲದಲ್ಲಿ ಬದಲಾವಣೆಯಿಲ್ಲದೆ ಸಾಗುವುದು ಸಾಧ್ಯವೇ ಇಲ್ಲವೆಂದು ಐನ್‌ಸ್ಟೈನನ ಸಾಪೇಕ್ಷ ಸಿದ್ಧಾಂತ ಹೇಳುತ್ತದೆ. ಕಾಲದ ಒಂದು ಆದಿಯಲ್ಲಿ ಅನಂತ ಸಾಂದ್ರತೆಯ ವಸ್ತುಸ್ಥಿತಿಯ ಮಹಾಸ್ಫೋಟವೊಂದರಿಂದ ಕಾಲದ ಚಾಲನೆ ಪ್ರಾರಂಭವಾಗಿರಬೇಕು. ಹೀಗೆ ವಿಕಾಸಹೊಂದುತ್ತಲೆ ಕಾಲದಲ್ಲಿ ಸಾಗುತ್ತಿರುವ ಈ ವಿಶ್ವವು, ಭವಿಷ್ಯದಲ್ಲಿ ಸಂಕೋಚನ ಹೊಂದುತ್ತ ಕೊನೆಗೆ ಮಹಾಸಂಕೋಚನಕ್ಕೊಳಗಾಗಿ ಅನಂತ ಸಾಂದ್ರತೆಯ ವಸ್ತುಸ್ಥಿತಿಯನ್ನೇ ಪಡೆಯಬಹುದು. ಅದು ಕಾಲದ ಒಂದು ಅಂತ್ಯ. ಪುನಃ ಮಹಾಸ್ಫೋಟ, ಪುನಃ ಕಾಲದ ಮತ್ತೊಂದು ಆದಿ, ಕಾಲಚಕ್ರದ ಪುನರಾರಂಭ. ಹೀಗೆ ವಿಶ್ವವೇ ಒಂದು ಮಹಾತರಂಗ. ನಾವಿರುವ ಈ ವಿಶ್ವವೇ ಮೊದಲನೆಯ ವಿಶ್ವವೂ ಅಲ್ಲ, ನಾವಿರುವ ಈ ಕಾಲವು ಮೊದಲನೆಯ ಕಾಲತರಂಗವೂ ಅಲ್ಲ. ಕಾಲವು ಹೀಗೆ ಆಗಾಗ್ಗೆ ಅಂತ್ಯಗೊಂಡು ನಿಶ್ಚಲವಾದಾಗ ಹಾಗೂ ವಸ್ತುವು ಸಂಕೋಚನ ಗೊಂಡು ಅನಂತಸಾಂದ್ರತೆಯ ಸ್ಥಿತಿಯನ್ನು ತಲುಪಿದಾಗ, ಆಕಾಶವು ಕಾಲದೊಂದಿಗೆ ಸಾಯುಜ್ಯಹೊಂದಿ ಶೂನ್ಯವಾಗುತ್ತದೆ. ಒಂದು ವೇಳೆ ಹೀಗಾಗದಿದ್ದರೂ ನೀಹಾರಿಕೆಗಳು ತಂತಮ್ಮ ನಕ್ಷತ್ರ-ಗ್ರಹೋಪಗ್ರಹಾದಿ ಪರಿವಾರಸಮೇತವಾಗಿ ಅಲ್ಲಲ್ಲೇ ತಂತಮ್ಮಲ್ಲಿಯೇ ಐಕ್ಯಗೊಂಡು ಅನಂತ ಸಾಂದ್ರತೆಯುಳ್ಳ ಅನಂತ ಗುರುತ್ವವುಳ್ಳ ಕೃಷ್ಣವಿವರ ಅಥವಾ ಕಪ್ಪುರಂಧ್ರಗಳಾಗುವುದಂತೂ ಖಂಡಿತ. ತನ್ನ ಬಳಿ ಬರುವ ಯಾವುದೇ ಬೆಳಕಿನ ಅಥವಾ ವಸ್ತುವಿನ ಕಣವನ್ನು ಇಂಥ ಕಪ್ಪುರಂಧ್ರವು ನುಂಗಿ ನೊಣೆದು ಅದರ ಕಾಲವನ್ನು ಶೂನ್ಯಗೊಳಿಸಿ ಬಿಡುವುದು. ಇಂತಹ ಐಕ್ಯಗೊಂಡ ಕೃಷ್ಣವಿವರಗಳು ಒಂದೇ ಆಗಿರಲಿ, ಹಲವಾರು ಆಗಿರಲಿ—ಅಲ್ಲಿ ಕಾಲದೊಂದಿಗೆ ವಸ್ತುಸ್ವರೂಪ, ಅದನ್ನು ಮುನ್ನಡೆಸುವ ವಿಶ್ವನಿಯಮಗಳು ಎಲ್ಲವೂ ಶೂನ್ಯವಾಗಿ ಬಿಡುವುದರಿಂದ, ಮುಂದಿನ ಕಲ್ಪ ಅಥವಾ ಕಾಲ ತರಂಗದಲ್ಲಿ ವಸ್ತುಸ್ವರೂಪ ಹಾಗೂ ವಿಶ್ವನಿಯಮಗಳನ್ನು ಪುನರ್‌ನಿರೂಪಿಸುವ ಸರ್ವಸ್ವಾತಂತ್ರ್ಯ ದೇವರಿಗೆ ಇರುತ್ತದೆ.

ವಸ್ತುಸ್ವರೂಪ ಹಾಗೂ ವಿಶ್ವನಿಯಮಗಳನ್ನು ಪುನರ್‌ನಿರೂಪಿಸುವ ಸರ್ವಸ್ವಾತಂತ್ರ್ಯ ದೇವರಿಗೆ ಇರುತ್ತದೆ.

## ಅಚಲೋಽಯಂ ಸನಾತನಃ

ಕ್ವಾಂಟಂ ಸಿದ್ಧಾಂತ ಹಾಗೂ ಸಾಪೇಕ್ಷಸಿದ್ಧಾಂತ ಇವೆರಡನ್ನೂ ಸಮನ್ವಯಗೊಳಿಸಿದಾಗ ಲಭಿಸುವ ಇನ್ನೊಂದು ಅದ್ಭುತವೆಂದರೆ, ಕೊನೆಮೊದಲಿಲ್ಲದ, ಚತುರಾಯಾಮಗಳ, ಏಕೀಕೃತ ಆಕಾಶ-ಕಾಲಗಳ ನಿರಂತರತೆ. ಇದು ಇಡೀ ವಿಶ್ವ ಅಥವಾ ಬ್ರಹ್ಮಾಂಡದ ಸಮಷ್ಟಿಮಟ್ಟದಲ್ಲಿನ (ನಕ್ಷತ್ರ-ನೀಹಾರಿಕೆ ಮಟ್ಟದ) ವಸ್ತುಸಾಂದ್ರತೆಯು ಆಕಾಶದಲ್ಲಿ ಏಕಪ್ರಕಾರವಾಗಿ ಹಂಚಿ ಹೋಗಿರುವುದನ್ನೂ, ವ್ಯಷ್ಟಿಮಟ್ಟದಲ್ಲಿ (ಎಂದರೆ ಗ್ರಹೋಪಗ್ರಹಗಳು, ಅವುಗಳಲ್ಲಿರಬಹುದಾದ ನಿರ್ಜೀವ-ಜೀವಂತ ವಸ್ತುಗಳಲ್ಲಿ) ವೈವಿಧ್ಯತೆಯೇ ಮೆರೆಯುತ್ತಿರುವುದನ್ನೂ, ಅಲ್ಲದೇ ಕಾಲದ ಏಕಮುಖೀ ಸ್ವರೂಪವನ್ನೂ ಸಹ ವಿವರಿಸುವುದು. ಆದರೆ ಕೊನೆಮೊದಲಿಲ್ಲದ, ಚತುರಾಯಾಮಗಳ, ಏಕೀಕೃತ ಆಕಾಶ-ಕಾಲಗಳ ನಿರಂತರತೆಯಲ್ಲಿರುವ ಬ್ರಹ್ಮಾಂಡ ಅಥವಾ ವಿಶ್ವವು ತನ್ನಲ್ಲಿಯೇ ತಾನು ಓತಪ್ರೋತವಾಗಿರಬೇಕಾಗುವುದು. ಇಂತಹ ವಿಶ್ವಕ್ಕೆ ಪ್ರಾರಂಭದ ಸೃಷ್ಟಿಯೂ ಇಲ್ಲ, ನಡೆಯಲು ಬೇಕಾದ ನಿಯಮಗಳ ಆಯ್ಕೆಯೂ ಇಲ್ಲ. ಈ ವಿಶ್ವಕ್ಕೆ ಕಲ್ಪಗಳಿಲ್ಲ; ಇದು ತರಂಗವಲ್ಲ; ಇದು ನಿರಂತರ ಅಚಲೋಽಯಂ ಸನಾತನಃ. ಇದನ್ನು ಕೇವಲ ಒಂದೇ ಏಕೀಕೃತ ಕ್ಷೇತ್ರ ಸಿದ್ಧಾಂತ (ಐನ್‌ಸ್ಟೈನ್ ಪ್ರಯತ್ನಿಸಿ ಸೋತಿರುವ, ಮುಂದೆ ಯಾರಿಗೂ ಈವರೆಗೂ ಸಿದ್ಧಿಸಿಲ್ಲದ ವಿಶ್ವವಿವರಣೆಯ ವಾದ)ವನ್ನು ಬಳಸಿ ವಿವರಿಸಿ ಬಿಡಬಹುದು! ಈ ವಿಶ್ವಕ್ಕೆ ಸೃಷ್ಟಿಕರ್ತನೊಬ್ಬನಿದ್ದರೆ ಅವನೂ ಅದರಿಂದ ಬೇರೆಯಾಗಿರುವುದು ಸಾಧ್ಯವಿಲ್ಲ; ಅವನಿಗೆ ಯಾವ ಕೆಲಸವೂ ಇಲ್ಲ. ಅವನು ನಿರಂತರ ಸಾಕ್ಷಿಯಾಗಿರಬೇಕಾಗುತ್ತದೆ!

ಒಂದು ವೇಳೆ ಮುಂದೊಂದು ದಿನ ಇಂಥ ಏಕೀಕೃತ ಕ್ಷೇತ್ರ ಸಿದ್ಧಾಂತವೊಂದು ಪ್ರಮಾಣೀಕರಿಸಲ್ಪಟ್ಟರೂ, ಅದೂ ಕೇವಲ ವೈಜ್ಞಾನಿಕ ನಿಯಮಗಳ, ಹಲಕೆಲವು ಸಮೀಕರಣಗಳ ಇನ್ನೊಂದು ಸಮುದಾಯ ತಾನೆ? ಆದರೆ ಆ ನಿಯಮಗಳಿಗೆ ಮತ್ತು ಸಮೀಕರಣಗಳಿಗೆ ಜೀವತುಂಬಿ, ಅವುಗಳು ಕಾರ್ಯಕಾರಿಯಾಗುವುದಕ್ಕೊಂದು ವಿಶ್ವವನ್ನೂ ಕೊಟ್ಟಿರುವುದು ಯಾವುದು? ಆ ಭೌತಶಾಸ್ತ್ರೀಯವೂ ಗಣಿತಶಾಸ್ತ್ರೀಯವೂ ಆದ ವಿಶ್ವಮಾದರಿಗೆ ಹೊಂದಿಕೆಯಾಗಬಹುದಾದ ನಿಜವಿಶ್ವವೊಂದಾದರೂ ಏಕಿರಬೇಕು? ವಿಶ್ವವು ತಾನು ಅಸ್ತಿತ್ವದಲ್ಲಿರುವ ತೊಂದರೆಯನ್ನಾದರೂ ಏಕೆ ತೆಗೆದುಕೊಳ್ಳಬೇಕು? ವಿಶ್ವವು ತಂತಾನೆ ಅಸ್ತಿತ್ವದಲ್ಲಿದೆಯೋ, ಅದಕ್ಕೊಬ್ಬ ಸೃಷ್ಟಿಕರ್ತನಿದ್ದಾನೆಯೋ? ವಿಶ್ವವನ್ನು ಸೃಷ್ಟಿಸಿದವನೊಬ್ಬನಿದ್ದರೆ, ಅವನನ್ನು ಸೃಷ್ಟಿಸಿದವರು ಯಾರು? ವಿಶ್ವವಾಗಲಿ, ನಾವುಗಳಾಗಲಿ ಏತಕ್ಕಾಗಿ ಅಸ್ತಿತ್ವದಲ್ಲಿ ಇದ್ದೇವೆ ಎಂಬುದು ತಿಳಿದರೆ, ದೇವರ ಕಲ್ಪನೆ ಅರ್ಥವತ್ತಾದೀತು.



*ಹಿಮಾಲಯದ ಅವರ್ಣನೀಯ ಧವಳಕಾಂತಿಯ ಮುಗಿಲೆತ್ತರದ ಹಿಮಾವೃತ ಶಿಖರಗಳು*

## ವೇದಕಾಲದ ದಾರ್ಶನಿಕ ಅನ್ವೇಷಣೆ

ಕಡಮೆಯೆಂದರೂ ಮೂರು ಸಾವಿರ ವರ್ಷಗಳ ಹಿಂದೆ, ವೇದಗಳ ಕಾಲದ ಮಹರ್ಷಿಗಳ ಮುಂದೆ ಇದ್ದವುಗಳೂ ಇಂಥವೇ ಪ್ರಶ್ನೆಗಳು; ಭಾಷೆ ಮಾತ್ರ ಬೇರೆ. ಆ ದಾರ್ಶನಿಕ ಮಹರ್ಷಿಗಳು ಇದ್ದದ್ದು ಅನಿರ್ವಚನೀಯ ಪ್ರಕೃತಿ ಸೌಂದರ್ಯದ ನಡುವೆ; ಹಿಮಾಲಯದ ಅವರ್ಣನೀಯ ಧವಳಕಾಂತಿಯ ಭೂಮಾದ್ಭುಮ ಸೂಕ್ಷ್ಮಾತ್ಸೂಕ್ಷ್ಮ ಭವದೂರ ಶಿವಸಾನ್ನಿಧ್ಯದ ನಡುವೆ; ಮುಗಿಲೆತ್ತರದ ಹಿಮಾವೃತ ಶಿಖರಗಳು, ವಿಶಾಲವಾದ ಹರಿತ್ ಸಿರಿಯ ಕಣಿವೆಗಳು, ಭೋರ್ಗರೆದು ನೆಗೆಯುವ ಮಹಾನದಿಗಳು, ಅತಿರೇಕವಿಲ್ಲದ ಹಿತವಾದ ಋತುವೈಭವ —ಎಲ್ಲವೂ ಅವರ ಸಮ್ಯಕ್‌ದೃಷ್ಟಿಯನ್ನು ಪೋಷಿಸಿದವು. ಇಂಥ ದಿವ್ಯದೇದೀಪ್ಯ ಪರಿಸರದ ಮಧ್ಯೆ ಪುಳಕಿತಗೊಂಡ ಅವರ ದೃಷ್ಟಿ ಭೂಮಾದ್ಭುಮವಾದುದರ ಜೊತೆಗೆ ಸೂಕ್ಷ್ಮಾತ್ಸೂಕ್ಷ್ಮವೂ ಆಗಿ ಅಂತರ್ಮುಖಿವಾಯಿತು; ಆಧಿಭೌತಿಕದಿಂದ ಆಧಿದೈವಿಕದ ಮೂಲಕ ಅಧ್ಯಾತ್ಮವಾಯಿತು; ಸುಯ್ಲು ಸಂಸ್ಕೃತವಾಯಿತು; ಭಾಷೆ ಕಾವ್ಯವಾಯಿತು; ಕಾವ್ಯ ಗಾನವಾಯಿತು; ಗಾನ ಸಾಮವಾಯಿತು; ಸಾಮ ಧ್ಯಾನವಾಯಿತು. ಪ್ರಕೃತಿಯ ಸಹಜ ಸಂಭವನೀಯಗಳೂ ಅವರಿಗೆ ಪರಮಾದ್ಭುತ ಘಟನೆಗಳಾಗಿ ತೋರಿದುವು. ಅವುಗಳಿಗೆ ಅಧಿದೇವತೆಗಳನ್ನು ಕಲ್ಪಿಸಿ ಭಯಭಕ್ತಿಗಳಿಂದ ಪೂಜಿಸಲಾರಂಭಿಸಿದರು. ಮಿತ್ರ (ಎಂದರೆ ಸೂರ್ಯ), ವರುಣ (ನೀಲನಿಶೆಯ ಮೌನವಾಂತ ಶಾಂತಿಯ ದೇವರು), ದ್ಯು (ಆಕಾಶ), ಪೃಥ್ವೀ (ಭೂಮಿ) ಹಾಗೂ ಅಗ್ನಿ (ಬೆಂಕಿ)—ಈ ದೇವರುಗಳು ವೇದಗಳ ಕಾಲಕ್ಕಿಂತಲೂ ಮುಂಚಿನವರು.

ಋಗ್ವೇದದ ಒಬ್ಬ ಪ್ರಮುಖ ದೇವತೆಯೆಂದರೆ ಇಂದ್ರ– ನೀರು ಸುರಿಸಲೊಲ್ಲದ ಮೇಘಗಳೊಂದಿಗೆ ಹೋರಾಡಿ ಭೂಮಿಗೆ ಮಳೆ ಸುರಿಸುವ ಅಂತರಿಕ್ಷಾಧ್ಯಕ್ಷ. ಮೊದಲು ಕೇವಲ ಶಾಂತ ಸ್ವರೂಪಿಯೂ ರೂಪವಂತನೂ ಆಗಿದ್ದ ದಿತಿಪುತ್ರನಾಗಿದ್ದ ಇವನು ಕ್ರಮೇಣ ಯುದ್ಧೋತ್ಸಾಹಿಗಳಿಗೆ ಯಶಸ್ಸನ್ನು ಗಳಿಸಿಕೊಡುವ ದೇವತೆಯೆನ್ನಿಸಿಕೊಂಡ. ಯುದ್ಧೋತ್ಸಾಹವನ್ನೂ ಧೈರ್ಯವನ್ನೂ ಕೊಡುವ ಸೋಮಪಾನವೆಂದರೆ ಇವನಿಗೆ ಇನ್ನಿಲ್ಲದ ಪ್ರೀತಿ. ಸಿಡಿಲ ಮೂಲವಾದ ಪರ್ಜನ್ಯ (ಕಾಳಮೇಘ) ನಿಂದ ಜನಿಸಿದವನಿವನು.

### ಪರ್ಜನ್ಯಸೂಕ್ತ

ಮೂಲಿಕೆಗಳಲ್ಲಿ ಬೀಜವನ್ನು ಹಣ್ಣನ್ನೂ ಹುಟ್ಟಿಹಾಕುವ
ಮಹಾಬಲನಾದ ಪರ್ಜನ್ಯನನ್ನು ಸ್ತುತಿಸೋಣ.
ವೃಕ್ಷಗಳನ್ನು ಸೀಳುವ, ರಾಕ್ಷಸರನ್ನು ಕೊಲ್ಲುವ ಅವನ ಸಿಡಿಲಿಗೆ
ನಿಷ್ಪಾಪ ಜನರೂ ಹೆದರುವರು.
ಅಶ್ವಾರೋಹಿ ಚಾಟಿಏಟು ಕೊಟ್ಟು ಕುದುರೆಯನ್ನೋಡಿಸುವಂತೆ
ಇವನು ಮೇಘಗಳನ್ನೊಗ್ಗೂಡಿಸುವನು ;
ಅವುಗಳಲ್ಲಿ ಪರ್ಜನ್ಯ ನೀರು ತುಂಬಿದಂತೆ,
ದೂರದ ಸಿಂಹಗರ್ಜನೆಯಂತೆ ಅವು ಮೊಳಗುವುವು.
ಬಿರುಗಾಳಿ ಮೊರೆಯುವುದು, ಕೋಲ್ಮಿಂಚು ಹಾಯುವುದು,
ಭೂಮಿ ಬಾಯ್ಬಿರಿಯುವುದು, ಮೂಲಿಕೆಗಳೇಳುವುವು;
ಆಕಾಶ ಬೊಬ್ಬಿರಿದು ಜಲಧಿಗಳು ತುಂಬುವುವು
ಪರ್ಜನ್ಯ ಮಳೆಗರೆದು ಜೀವಿಗಳ ನಗಿಸುವನು.
ಪೃಥ್ವಿಯನೆ ನಡುಗಿಸುವ, ಗೋವುಗಳ ರಕ್ಷಿಸುವ,
ಸಸ್ಯಗಳ ಬೆಳೆಯಿಸುವ, ಬಹುರೂಪ ತಳೆಯಿಸುವ,
ಪರ್ಜನ್ಯ, ಹೇ ನೀನು ಕಾಪಾಡು ಎಮ್ಮುಗಳ.
ಕರೆತರು ಮರುತ್ತುಗಳ, ಇಳಿದು ಬಾ ಪರ್ಜನ್ಯ,
ಸುರಿಸಿ ಮಳೆಯನು ನೀನು ಕಾಪಿಡು ನಮ್ಮೆಲ್ಲರನು.
ಗರ್ಜಿಸಲೆ ವಜ್ರಧರ, ಸಸ್ಯಗಳ ಫಲಕಟ್ಟು;
ಜಲಭರಿತ ರಥದಲ್ಲಿ ಸುಳಿಯೆಮ್ಮ ನಡುವೆ ;
ತೆರೆ ನಿನ್ನ ಜಲಗರ್ಭ ನೆಲಮಟ್ಟ ನಡುವೆ ;
ಸಸ್ಯದವನತಶಿರವ ಮೇಲೆತ್ತಿ ಸಲಹು.
ಸುರಿ ಎತ್ತಿ ಜಲಭಾಂಡ ನೀರಾಗಲೆಮಗೆ ;
ನದಿನದಗಳ್ ಪ್ರವಹಿಸಲಿ ಪೂರ್ವಾಭಿಮುಖಿಕೆ.
ಬಾಂದಳವ ಸೋರಿಸುತ ಭೂಮಿಯನು ಮುಚ್ಚು;
ಬಾಯಾರ್ದ ಗಂಟಲಿಗೆ ನೀರಾಗಲಚ್ಚು
ಗರ್ಜಿಸುತ ಭೋರ್ಗರೆವ ಪರ್ಜನ್ಯ ನೀನು
ಮೇಘಮಥನವ ಮಾಡೆ ಭುವಿಗೆಲ್ಲ ಬಾಳು. . .
ಸುರಿಸಿ ಸಂತೋಷಿಸಿದೆ ಎಮ್ಮುಗಳ ನೀನು.
ಮರುಭೂಮಿಗಳ ನೆನೆಸಿ ತಿನಿಸುಫಲ ಬೆಳೆಸಿ
ಎಲ್ಲರನು ಸಲಹುತಿಹೆ ನಿಲಿಸಿನ್ನು ಮಳೆಯ ;
ಕೀರ್ತಿಸುತ ನಲಿಯುತಿವೆ ಜೀವರಾಶಿಗಳೆಲ್ಲ.

ಪರ್ಜನ್ಯನೆಂದರೆ ಸಸ್ಯಗಳಲ್ಲಿ ಬೀಜಾಂಕುರ ಮಾಡುವ ದೇವತೆಯೆಂದು ಆಗಿನ ನಂಬಿಕೆ. ಋಗ್ವೇದ ಸೂಕ್ತಗಳ ಕಾವ್ಯ ಗುಣಕ್ಕಾಗಿ ಪರ್ಜನ್ಯಸೂಕ್ತವನ್ನು ನೋಡಬಹುದು (*ಮಂಡಲ ೫, ಸೂಕ್ತ ೮೩*).

ಆಕಾಶಕ್ಕೂ ಭೂಮಿಗೂ ಮಧ್ಯದ ಈ ಪರ್ಯಾವರಣ ನಾಟಕದ ಜೊತೆಗೆ, ಮುಗಿಲೆತ್ತರದಲ್ಲಿ ಇನ್ನೊಂದೇ ನಾಟಕ—ಜೀವ ಜ್ಯೋತಿಯನ್ನು ಬೆಳಗಿಸುವ ಸವಿತೃ(ಸೂರ್ಯ)ವಿನದು ಹಾಗೂ ಎಣೆಯಿಲ್ಲದ ಸೌಂದರ್ಯವತಿ ದ್ಯುಪುತ್ರಿ ಉಷಾ ದೇವಿಯದು. ಋಗ್ವೇದದ ಋಷಿಗಳ ಕಾವ್ಯಕಲ್ಪನೆಗೆ ಈ ಇಬ್ಬರು ದೇವತೆಗಳು ಇನ್ನಿಲ್ಲದ ವೈವಿಧ್ಯ ವೈಶಾಲ್ಯಗಳನ್ನು ತುಂಬುತ್ತಾರೆ. ಋಷಿಗಳ ಭಾವಕ್ಕನುಸಾರವಾಗಿ ಇವರಿಬ್ಬರ ಪರಸ್ಪರ ಸಂಬಂಧ, ಇತರ ದೇವತೆಗಳೊಡನೆ ಇವರ ಸಂಬಂಧ ಬದಲಾಯಿಸುತ್ತದೆ.

## ಏಕದೇವಕಲ್ಪನೆ

ವೇದಗಳ ವಿಭಿನ್ನ ದೇವತೆಗಳು ಕ್ರಮೇಣ ಒಂದಾಗಿ ಋಷಿಗಳಲ್ಲಿ ವಿಶ್ವಕ್ಕೆಲ್ಲಾ ಒಬ್ಬನೇ ದೇವನೆಂಬ ಭಾವ ಬೆಳೆಯಿತು. ಅದ್ವಿತೀಯನಾದ ಇವನು ಮಾನವನು ವಿವರಿಸಬಹುದಾದ ಎಲ್ಲ ಗುಣಲಕ್ಷಣಗಳನ್ನೂ ಮೀರಿ ನಿಂತವನು ಎಂಬ ಭಾವವು ಮೊಳೆತು ಮುಂದಿನ ಉಪನಿಷತ್ತುಗಳ ಕಾಲದ ಅದ್ವೈತಚಿಂತನೆಗೆ ದಾರಿ ಮಾಡಿಕೊಟ್ಟಿತು. ಉದಾಹರಣೆಗೆ ಪ್ರಕೃತಿಯ, ಪರ್ಯಾವರಣದ ಅಧಿಪತಿಯಾದ ವರುಣನ ವರ್ಣನೆಯನ್ನು ನೋಡಬಹುದು. (*ಅಥರ್ವಣ ವೇದ, ೪೧೬, ಶ್ಲೋಕ ೧೫*) :

### ವರುಣನ ವರ್ಣನೆ

ಇಬ್ಬರೊಟ್ಟಿಗೆ ಸೇರಿ ಬೇರಾರೂ ಇಲ್ಲೆಂದು
ಷಡ್ಯಂತ್ರ ರೂಪಿಸಿರೆ ಅಲ್ಲಿಹನು ವರುಣ —
ಮೂರನೆಯನವನೆಲ್ಲ ಅರಿವ ಜಾಣ;
ಈ ಭೂಮಿ ಆಕಾಶ ಎಲ್ಲದಕು ಅವ ರಾಜ
ಮಿತಿಯರಿಯದವನ ಸಿರಿ ನಮ್ಮ ವರುಣ.
ಜಲಧಿದ್ವಯಗಳು ಅವನ ಒಡಲೊಳಗೆ ಅಡಗಿಹವು,
ಆದರೂ ಅವನಿಹನು ಹನಿನೀರಿನೊಳಗೆ.
ಅಂತರಿಕ್ಷವ ಮೀರಿ ಹಾರಿ ಹೊರಟವನರಿಯ,
ರಾಜ ವರುಣನ ಹಿಡಿತ ಅಲ್ಲಿಯೂ ಬಿಡದೆಂದು —
ಈ ಭೂಮಿ ಆಕಾಶ ಮೂಲೆಮೂಲೆಗಳಲ್ಲಿ
ವರುಣಭಟರಡಗಿಹರು ಎಲ್ಲ ಅರಿವವರು.
ಸಹಸ್ರ ಕಣ್ಣುಗಳಿಂದ ಪರಿಕಿಸುತ ನೋಡುವರು
ಲೋಕವ್ಯಾಪಾರಗಳ ಸಾಕ್ಷಿಯವರು.
ನರನಿಮೇಷವನರಿವ ನಿರ್ನಿಮೇಷದ ವರುಣ,
ಎಲ್ಲವನು ಅರಿವವನು ರಾಜ ವರುಣ—
ವಿಶ್ವಜಾಲದಿ ಪಗಡೆಯಾಡುವನು ವರುಣ. . .

ಇಂಥದೇ ವಿಶ್ವವ್ಯಾಪಿಯಾದ ಏಕದೇವಕಲ್ಪನೆ ಋಗ್ವೇದದ ಪ್ರಖ್ಯಾತ ನಾಸದೀಯಸೂಕ್ತ, ಪುರುಷಸೂಕ್ತ ಹಾಗೂ ಹಿರಣ್ಯಗರ್ಭಸೂಕ್ತಗಳಲ್ಲೂ ಕಂಡುಬರುತ್ತದೆ. ಮೂರ್ತೀಭವಿಸಿದ ದೇವ ಕಲ್ಪನೆಯಿಂದ ಪ್ರಾರಂಭಿಸಿದ ದಾರ್ಶನಿಕ ಋಷಿಗಳು ಅಮೂರ್ತ ಕಲ್ಪನೆಯಲ್ಲಿ ಎಲ್ಲಿಯವರೆಗೆ ಸಾಗಿದರೆಂದರೆ, ಏಕದೇವತತ್ತ್ವವನ್ನು ಅವರು **ತದೇಕಮ್** ಎಂದೇ ಕರೆಯಲಾರಂಭಿಸಿದರು. ನಾಸದೀಯ ಸೂಕ್ತದ ಮೊದಲ ಏಳು ಶ್ಲೋಕಗಳಲ್ಲಿ ಈ ತಾತ್ವಿಕ ಭಾವನೆಯ ಪರಾಕಾಷ್ಠೆಯನ್ನು ಕಾಣಬಹುದು.

### ನಾಸದೀಯ ಸೂಕ್ತ

ಸತ್ತೆಂಬುದಿರಲಿಲ್ಲ, ಅಸತ್ತೂ ಇರಲಿಲ್ಲ,
ಲೋಕ, ನೀಲಾಕಾಶ, ಆಚೆಯದು ಇರಲಿಲ್ಲ.
ಯಾರು ಬಲ್ಲರು ಅದನು ಯಾವ ಆಶ್ರಯದಲ್ಲಿ
ಏನನಾವರಿಸಿತ್ತು— ಜಲಧಿಯಿತ್ತೆ?
ಮೃತ್ಯುವೂ ಇರಲಿಲ್ಲ, ಅಮೃತ್ಯುವಿರಲಿಲ್ಲ,
ರಾತ್ರಿಹಗಲುಗಳಿಂಗೆ ಭೇದವಿರಲಿಲ್ಲ;
ರಾತ್ರಿ ಹಗಲುಗಳನ್ನೂ ಹುಟ್ಟಿರಲೆ ಇಲ್ಲದಿರೆ—
ಆದಿಮೂಲವದೊಂದು ಉಸಿರಾಡುತಿತ್ತು;
ಗಾಳಿಯಿಲ್ಲದೆ ಉಸಿರ ಹೊರೆಯುತಿತ್ತು.
ಅದ ಹೊರತು ಬೇರೇನು ಇರಲಿಲ್ಲ ವಿಶ್ವದಲಿ.
ಅಡಗಿತ್ತು ಕತ್ತಲೆಯು ಕಾಳಕತ್ತಲೆಯಲ್ಲಿ
ಎಲ್ಲವೂ ಅವ್ಯಕ್ತ ಜಲಧಿಯಾಗಿತ್ತು.
ಕಾರಣಶರೀರವದು ಈ ಲೋಕ ಹಾಗಿತ್ತು—
ಹುಟ್ಟಿದೆಲ್ಲವು ಶೂನ್ಯದಿಂದ ಕವಿದಿತ್ತು.
ಅದರ ತಪ, ಅದರಿಚ್ಛೆಯಿಂದ ಮೇಲೆದ್ದಿತ್ತು ಅದು—
ಕಾಳಗರ್ಭದ ಹೊರಗೆ ಮನಸು ಬಂದಿತ್ತು.
ಈ ಇಚ್ಛೆ ಎಲ್ಲಿಯದು, ಈ ಕಾಮವೆಲ್ಲಿಯದು?
ಅದರೆದೆಯಲಡಗಿದ್ದು ಮೊಳೆತ ಬೀಜ;
ನಶಿತಲೋಕದ ಬೀಜ, ಕಾಲಚಕ್ರದ ಬೀಜ;
ಋಷಿಹೃದಯದಲಿ ಹೊಳೆದ ಮೊದಲಬೀಜ.
ಏನಿದಾಲೋಚನೆ, ಶಬ್ದ, ಮೇಲಿಲ್ಲ, ಕೆಳಗಿಲ್ಲ—
ಯಾರು ಬಲ್ಲರು ಏನು ಲೋಕಕಾರಣವೆಂದು
ಭೋಕ್ತ ಪರವಾಗಿರಲು ಭೋಗ್ಯಾಪರವಾಗಿತ್ತು;
ಅದೆ ಗರ್ಭ ಕಟ್ಟಿಸಿತು, ಅದೆ ಗರ್ಭತಾಳಿತ್ತು.
ಅದನು ತಿಳಿದವರಾರು ಏಕೆಂದು, ಹೇಗೆಂದು?
ಅದು ಹುಟ್ಟ ನಂತರದಿ ಬಂದವರು ದೇವರ್ಗಳ್
ಏನೆ ಯಾರ್ಗೆ ಅದರರಿವು ಅದರ ಹೊರತು?

ಈ ಮುಕ್ತಮನಸ್ಸಿನ ಸಂದೇಹಸೂಚಕ ಋಷಿವಾಣಿ ಪ್ರಕೃತಿಯ ಅದ್ಭುತದೆದುರು ಅದರ ವಿನಯವನ್ನೂ ತಿಳಿದುಕೊಳ್ಳಬೇಕೆಂಬ ಕುತೂಹಲವನ್ನೂ ತಮಗೆ ಗೊತ್ತಿಲ್ಲದ್ದನ್ನು ಗೊತ್ತಿಲ್ಲವೆಂದು ಒಪ್ಪಿಕೊಳ್ಳುವ ಮಗುವಿನಂತಹ ಮನಸ್ಸನ್ನೂ ತೋರಿಸುತ್ತದೆ. ಈ ಗುಣಗಳನ್ನು ಇಂದಿನ ವಿಚಾರವಂತರಲ್ಲಿ, ವಿದ್ಯಾವಂತರಲ್ಲಿ, ವಿಜ್ಞಾನಿಗಳಲ್ಲಿ ನಾವು ಕಾಣಬಹುದೆ?



# ಮಾಯಾದೂರ ಮಾಯಾವತಿ

ಇದೇ ಹಿಮಾಲಯವಾಗಿ, ಇಲ್ಲಿ ಒಂದು ಆಶ್ರಮವಿದ್ದಿದ್ದರೆ!

ಸ್ವಾಮಿ ವಿವೇಕಾನಂದ (ಒಂದು ಪತ್ರದಲ್ಲಿ)

ಸ್ವಾಮಿ ಆತ್ಮಜ್ಞಾನಂದ

'ಹಿಮಾಲಯ' ಹೆಸರನ್ನು ಕೇಳಿದರೇ ಸಾಕು, ಒಂದು ವಿಶಾಲವಾದ, ಬೃಹದಾಕಾರದ ಭಾವತರಂಗ ಯಾವುದೋ ಅವರ್ಣನೀಯ ಆನಂದವನ್ನು ಜಾಗೃತಗೊಳಿಸುವುದು. ಈ ಭಾವನೆಗೆ ವಯಸ್ಸಿನ ಸೀಮೆಯಿಲ್ಲ, ದೇಶ-ವಿದೇಶದ ಗಡಿಯಿಲ್ಲ. ಮಹಾಕವಿ ಕಾಳಿದಾಸ ತನ್ನ ರಘುವಂಶ ಕಾವ್ಯದಲ್ಲಿ **'ಅಸ್ತ್ಯುತ್ತರಸ್ಯಾಂ ದಿಶಿ ದೇವತಾತ್ಮಾ ಹಿಮಾಲಯೋ ನಾಮ ನಗಾಧಿರಾಜಃ'** ಎಂದು ಈ ಪರ್ವತಸ್ತೋಮವನ್ನು ಹಾಡಿ ಹೊಗಳಿದ್ದಾನೆ. ಭರತಖಂಡದ ಶಿರೋಭೂಷಣದಂತೆ ಪೂರ್ವದಿಂದ ಪಶ್ಚಿಮದವರೆಗೂ ವಿಶಾಲವಾಗಿ ಹಬ್ಬಿರುವ ಈ ಪರ್ವತ ರಾಶಿಯು ತನ್ನ ಮಡಿಲಿನಲ್ಲಿ ಪ್ರಕೃತಿ ದೇವತೆಯನ್ನೇ ಸೆರೆಹಿಡಿದುಬಿಟ್ಟಿದೆ. ನಾ ಮುಂದೆ ತಾ ಮುಂದೆ ಎಂದು ಪೈಪೋಟಿಯಲ್ಲಿರುವಂತೆ ಮೇಲೇರುವ ಶಿಖರಗಳು, ಸಹಸ್ರಾರು ವರುಷಗಳಿಂದ ಶೋಭಿಸುತ್ತಿರುವ ಆ ಶುಭ್ರ ಹಿಮರಾಶಿ, ಸಾವಿರಾರು ಜಾತಿಯ ಸಸ್ಯ ಮತ್ತು ಪ್ರಾಣಿವರ್ಗ, ಪ್ರಯಾಣಿಕನ ಮನಸ್ಸನ್ನು ಸೆಳೆಯುವ ವಿವಿಧ ಹೂಗಿಡಗಳ ಕಣಿವೆಗಳು, ಮುಗಿಲೆತ್ತರದಿಂದ ಸುರಿದು ಬರುತ್ತಿರುವ ಅಮೃತಧಾರೆಯಂತಿರುವ ಜಲಪಾತಗಳು, ಕಲ್ಲನ್ನೇ ಕೊರೆದು ನುಗ್ಗಿನಲಿಯುವ ನದಿಗಳು – ಆ ಪರ್ವತರಾಜನ ಸೌಂದರ್ಯವನ್ನು ವರ್ಣಿಸಲಾದೀತೇ! ಇದಲ್ಲದೇ ಅಸಂಖ್ಯಾತ ಋಷಿಮುನಿಗಳು ತಮ್ಮ ತಪಸ್ಸು, ಸಾಧನೆಗಳಿಂದ ಹಿಮವಂತನ ಮಹಿಮೆಯನ್ನು ಮತ್ತಷ್ಟು ಹೆಚ್ಚಿಸಿದ್ದಾರೆ. ಹಿಮಾಲಯದ ಪ್ರವಾಸಿತಾಣಗಳಿಂದ ಕೋಟ್ಯಂತರ ರೂಪಾಯಿಗಳ ವಿದೇಶೀ ವಿನಿಮಯವು ಸಹ ದೊರಕುತ್ತಿದೆ.

ಇತ್ತೀಚೆಗಷ್ಟೆ ತನ್ನ ಅಪೂರ್ವ ಸೇವೆಯ ಶತಮಾನೋತ್ಸವವನ್ನು ಆಚರಿಸಿದ ಮಾಯಾವತಿ ಅದ್ವೈತಾಶ್ರಮದ ಒಂದು ಕಿರುಪರಿಚಯವನ್ನು ಇಲ್ಲಿ ಕೊಡಲಾಗಿದೆ. ಸ್ವಾಮಿ ಆತ್ಮಜ್ಞಾನಂದರು ಮೈಸೂರು ರಾಮಕೃಷ್ಣ ಆಶ್ರಮದಲ್ಲಿ ಸೇವೆ ಸಲ್ಲಿಸುತ್ತಿರುವರು.

## ಹಿಮಾಲಯದ ಹಂಬಲ

ಸ್ವಾಮಿ ವಿವೇಕಾನಂದರಿಗೆ ಹಿಮಾಲಯವೆಂದರೆ ಬಹಳ ಪ್ರೀತಿ, ಗೌರವ. ತಮ್ಮ ಪರಿವ್ರಾಜಕ ಜೀವನದಲ್ಲಿ ಅವರು ಹೆಚ್ಚುಕಾಲ ಇರಲು ಬಯಸಿದ್ದೂ ಅಲ್ಲೇ. ಶ್ರೀ ಪ್ರಮದದಾಸ ಮಿತ್ರರಿಗೆ ಬರೆದ ೬.೭.೧೮೯೦ರ ಕಾಗದದಲ್ಲಿ, 'ನಾನು ಹಿಮಾಲಯಕ್ಕೆ ಹೋಗಲು ತವಕಿಸುತ್ತಿದ್ದೇನೆ' ಎಂದು ತಮ್ಮ ಹಂಬಲವನ್ನು ವ್ಯಕ್ತಪಡಿಸಿದ್ದರು. ಆದರೆ, ದೀರ್ಘಕಾಲ ಅಲ್ಲಿ ಉಳಿದು, ಧ್ಯಾನಸ್ಥರಾಗುವ ಅವರ ಆಸೆ ಈಡೇರಲಿಲ್ಲ. ವಿಧಿ ಅವರಿಗಾಗಿ ಬೇರೆ ಕಾರ್ಯಕ್ರಮಗಳನ್ನು ಹೆಣೆದಿತ್ತು.

ವಿವೇಕಾನಂದರಿಗೆ ಮೊದಲಿನಿಂದಲೂ ಧ್ಯಾನದಲ್ಲಿ ಒಲವು. ಶ್ರೀರಾಮಕೃಷ್ಣರು ಅವರನ್ನು ಧ್ಯಾನಸಿದ್ಧರೆಂದೇ ಕರೆದಿದ್ದಾರೆ. ಸಣ್ಣ ಪ್ರಾಯದಿಂದಲೂ ಸಹಜವಾಗಿಯೇ ಅವರು ಧ್ಯಾನದಲ್ಲಿ ತಲ್ಲೀನರಾಗುತ್ತಿದ್ದರು. ಹಿಮಾಲಯದಲ್ಲಿ ನೆಲಸಿ ಅಲ್ಲಿ ಧ್ಯಾನದಲ್ಲಿ ತಲ್ಲೀನರಾಗುವುದೇ ಅವರ ಹೆಬ್ಬಯಕೆಯಾಗಿತ್ತು. 'ನಾನೆಂದೂ ಪ್ರಚಾರಕನಾಗಿರಲಿಲ್ಲ, ಆಗುವುದೂ ಇಲ್ಲ–ನನ್ನ ಸ್ಥಾನ ಹಿಮಾಲಯದಲ್ಲಿ' ಎಂದು ಪ್ರೊ. ಜೆ. ಹೆಚ್. ರೈಟ್ ಅವರಿಗೆ ತಮ್ಮ ಮೇ ೧೮೯೪ರ ಪತ್ರದಲ್ಲಿ ಬರೆಯುತ್ತಾರೆ ಸ್ವಾಮೀಜಿ. ನ್ಯೂಯಾರ್ಕಿನ ಒಂದು ಬೆಟ್ಟಪ್ರದೇಶದಲ್ಲಿ ಮಿಸ್. ಫಿಲಿಪ್ಸ್‌ರವರ ಸುಂದರ ನಿವಾಸವನ್ನು ಕಂಡು ಹೇಲ್ ಸಹೋದರಿಯರಿಗೆ ಬರೆದ ೨೬.೭.೧೮೯೫ರ ಪತ್ರದಲ್ಲಿ, 'ಇದೇ ಹಿಮಾಲಯವಾಗಿ, ಇಲ್ಲಿ ಒಂದು ಆಶ್ರಮವಿದ್ದಿದ್ದರೆ!' ಎಂದು ಉದ್ಗರಿಸಿದರು. ಮೊಟ್ಟ ಮೊದಲ ಬಾರಿಗೆ ಹಿಮಾಲಯದಲ್ಲಿ ಒಂದು ಆಶ್ರಮವನ್ನು ಸ್ಥಾಪಿಸುವ ಅವರ ಬಯಕೆಯನ್ನು ಇಲ್ಲಿ ಕಾಣುತ್ತೇವೆ.

ಮಾಯಾವತಿಯ ಅದ್ವೈತ ಆಶ್ರಮದ ಸ್ಥಾಪನೆ, ರಾಮಕೃಷ್ಣ ಮಹಾಸಂಘದ ಇತಿಹಾಸದಲ್ಲಿ ಒಂದು ಮೈಲುಗಲ್ಲಾಗಿದೆ. ಸಾಂಪ್ರದಾಯಿಕ ಆಚರಣೆ, ಪೂಜೆ ಪುನಸ್ಕಾರಾದಿಗಳಿಲ್ಲದ ಪ್ರಪ್ರಥಮ ಕೇಂದ್ರವಿದು. ಸಾಮಾನ್ಯವಾಗಿ ಅದ್ವೈತ ಮತದ ಮಠಗಳಲ್ಲಿ ಶಿವ, ದೇವಿಯರ ಪೂಜೆ ವಾಡಿಕೆ. ಸಂನ್ಯಾಸಿಗಳ ಆದರ್ಶವಾದ ಶಿವನಿಗೂ ಕೂಡ ಇಲ್ಲಿ ಪೂಜೆ, ನೈವೇದ್ಯಗಳಿಲ್ಲ. ದ್ವೈತ ಭಾವನೆಗೆ ಇಲ್ಲಿ ಪ್ರವೇಶಕೂಡದು ಎಂದೇ ಸ್ವಾಮೀಜಿಯವರ ಕಟ್ಟಾಜ್ಞೆ. ಅಷ್ಟೇ ಅಲ್ಲ, ವಿದೇಶೀಯರ ನೆರವಿನಿಂದ ಪ್ರಾರಂಭಿಸಿದ ಮೊದಲ ಆಶ್ರಮವಿದು. ಇಂತಹ ಆಶ್ರಮವನ್ನು ಸ್ಥಾಪಿಸುವ ಇಚ್ಛೆ ವಿವೇಕಾನಂದರಿಗೆ ಏಕೆ ಬಂತು? ಯೂರೋಪ್ ಪ್ರವಾಸದ ಸಮಯದಲ್ಲಿ ಸ್ವಾಮೀಜಿ ಆಗಸ್ಟ್ ೧೮೯೬ರಲ್ಲಿ ಸ್ವಿಟ್ಜರ್‌ಲ್ಯಾಂಡ್‌ಗೆ ಭೇಟಿಯಿತ್ತಾಗ, ಅವರೊಡನೆ ಸೆವಿಯರ್ ದಂಪತಿಗಳೂ ಇದ್ದರು. ಸ್ವಾಮಿ ವಿವೇಕಾನಂದರಿಂದ ವೇದಾಂತ ವಿಚಾರವನ್ನು ಕೇಳಿ ಪ್ರಭಾವಿತರಾಗಿ, ಭಾರತದಲ್ಲಿ ನೆಲೆಸಿ ಸಾಧನೆಗೈಯ್ಯಬೇಕು ಎಂದು ಬಯಸಿದರು ಶ್ರೀ ಜೇಮ್ಸ್ ಹೆನ್ರಿ ಸೆವಿಯರ್ ಮತ್ತು ಚಾರ್ಲಟ್ ಎಲಿಜಬೆತ್ ಸೆವಿಯರ್ ದಂಪತಿಗಳು. ಮೊದಲ ಭೇಟಿಯಲ್ಲೇ ಸ್ವಾಮೀಜಿ ಅವರನ್ನು ಕೇಳಿದ್ದರು, 'ತಾಯಿ, ಸೆವಿಯರ್ (ಹಾಗೆಂದೇ ಸ್ವಾಮೀಜಿ ಆಕೆಯನ್ನು ಸಂಬೋಧಿಸುತ್ತಿದ್ದುದು), ನೀವು ಭಾರತಕ್ಕೆ

ಬರಲು ಇಚ್ಛಿಸುವುದಿಲ್ಲವೇ? ನಾನು ನಿಮಗೆ ನನ್ನ ಸಾಧನೆಯ ಮೂಲಕ ಪಡೆದ ಅಮೂಲ್ಯ ರತ್ನಗಳನ್ನೇ ಕೊಡಲಿಚ್ಛಿಸುತ್ತೇನೆ.' ಹಿಮಾಚ್ಛಾದಿತ ಆಲ್ಪ್ಸ್ ಪರ್ವತಗಳನ್ನು ಕಂಡು ವಿವೇಕಾನಂದರಿಗೆ ಹಿಮಾಲಯದ ನೆನಪಾಯಿತು, ಅಲ್ಲಿ ಒಂದು ಆಧ್ಯಾತ್ಮಿಕ ಕೇಂದ್ರವನ್ನು ಸ್ಥಾಪಿಸುವ ಹಂಬಲ ಮತ್ತಷ್ಟು ದೃಢವಾಯಿತು. ಆಲ್ಮೋರದ ಹತ್ತಿರ ಒಂದು ಆಶ್ರಮವನ್ನು ಸ್ಥಾಪಿಸಿ ಅಲ್ಲಿ ವೇದಾಂತದ ಸಾಧನೆಗೆ ತಮ್ಮ ಜೀವನವನ್ನೇ ಮುಡಿಪಾಗಿಡಲು ಸಿದ್ಧವಿರುವ ಸೇವಿಯರ್ ದಂಪತಿಗಳಂತಹ ವಿದೇಶೀಯರಿಗೆ ಅವಕಾಶ ಮಾಡಿಕೊಡಬೇಕೆಂದು ತೀರ್ಮಾನಿಸಿ, ಆಲ್ಮೋರದ ಶ್ರೀ ಲಾಲಾ ಬದ್ರಿ ಷಾ ಅವರಿಗೆ ಸೂಕ್ತವಾದ ಜಾಗವೊಂದನ್ನು ಖರೀದಿಸುವಂತೆ ತಿಳಿಸಿ ಪತ್ರ ಬರೆದರು.

## ಸೇವಿಯರ್ ದಂಪತಿಗಳ ಆಗಮನ

ಸ್ವಾಮೀಜಿ ಭಾರತಕ್ಕೆ ಮರಳಿದಾಗ ಅವರೊಡನೆ ಸೇವಿಯರ್ ದಂಪತಿಗಳೂ ಬಂದರು. ತನ್ನ ಪ್ರೀತಿಯ ಪುತ್ರನನ್ನು ಸ್ವಾಗತಿಸಲು ಭಾರತವು ಹಾತೊರೆಯುತ್ತಿತ್ತು. ಎಲ್ಲೆಲ್ಲಿಯೂ ಉತ್ಸಾಹದ ಚಿಲುಮೆ. ಭಾರತದ ಪರಂಪರೆಯ ಕೀರ್ತಿಯನ್ನು ಜಗತ್ತಿನಾದ್ಯಂತ ಕೆಚ್ಚೆದೆಯಿಂದ ಪ್ರಸಾರ ಮಾಡಿದ ಧೀರ ಸಂನ್ಯಾಸಿಯನ್ನು ಬರಮಾಡಿಕೊಳ್ಳಲು ಎಲ್ಲೆಲ್ಲಿಯೂ ಸಂಭ್ರಮ. ಸೇವಿಯರ್ ದಂಪತಿಗಳು ನೇರವಾಗಿ ಆಲ್ಮೋರಕ್ಕೆ ಬಂದು ಥಾಮ್‌ಸನ್ ಹೌಸ್‌ನಲ್ಲಿ ವಾಸವಾಗಿದ್ದರು. ಸ್ವಾಮಿ ವಿವೇಕಾನಂದರು ಅಲ್ಲಿಗೆ ಬರುವಷ್ಟರಲ್ಲಿ 'ಪ್ರಬುದ್ಧ ಭಾರತ'ದ ಪ್ರಥಮ ಸಂಪಾದಕರಾಗಿದ್ದ ಶ್ರೀ ಬಿ. ಆರ್. ರಾಜಮ್ ಅಯ್ಯರ್ ಮದರಾಸಿನಲ್ಲಿ ಅಸು ನೀಗಿದರು. ಆದಕಾರಣ, ಪತ್ರಿಕೆಯ ಪ್ರಕಟಣೆ ಸ್ಥಗಿತಗೊಂಡಿತು. ಇದರಿಂದ ಸ್ವಾಮೀಜಿಯವರಿಗೆ ಬಹಳ ದುಃಖವಾಯಿತು. ಹಿಮಾಲಯದಿಂದ ಪತ್ರಿಕೆಯನ್ನು ಮುಂದುವರೆಸಿ ತನ್ಮೂಲಕ ಭಾರತಕ್ಕೆ ಸೇವೆ ಸಲ್ಲಿಸಲು ಸೇವಿಯರ್ ದಂಪತಿಗಳನ್ನು ಪ್ರೇರೇಪಿಸಿದರು. ಥಾಮ್‌ಸನ್ ಹೌಸ್ 'ಪ್ರಬುದ್ಧ ಭಾರತ'ದ ಎರಡನೇ ಮನೆಯಾಯಿತು. ಶ್ರೀ ಸೇವಿಯರ್ ಅದರ ಮ್ಯಾನೇಜರ್ ಆದರು. ಸ್ವಾಮಿ ಸ್ವರೂಪಾನಂದರು ಅದರ ಪ್ರಥಮ ಸಂನ್ಯಾಸಿ ಸಂಪಾದಕರಾದರು. 'ಪ್ರಬುದ್ಧ ಭಾರತ'ಕ್ಕಾಗಿ ಒಂದು ಸ್ಥಾಯಿ ನಿಲಯವನ್ನು ಹುಡುಕುತ್ತಿದ್ದರು ಸೇವಿಯರ್ ದಂಪತಿಗಳು.

ಮಾಯಾವತಿಯ ಸುಂದರವಾದ ಚಹಾ ತೋಟವನ್ನು ಕಂಡು ಸ್ವಾಮೀಜಿಯ ಅನುಮತಿಯೊಂದಿಗೆ ಸೇವಿಯರ್ ದಂಪತಿಗಳು ಅದನ್ನು ಖರೀದಿಸಿದರು. ೮೧೦ ನಾಲಿಗಳು (ಸುಮಾರು ೪೧ ಎಕರೆ) ವಿಸ್ತಾರದ ಹಿಮಾಲಯದ ತಪ್ಪಲಿನಲ್ಲಿರುವ ಅರಣ್ಯ ಪ್ರದೇಶ ಅವರ ಹೃನ್ಮನ ಸೆಳೆಯಿತು. ೬,೮೦೦ ಅಡಿ ಎತ್ತರದಲ್ಲಿರುವ, ಹಸಿರು ಗಿಡ-ಮರಗಳಿಂದ ಶೋಭಿಸುವ ಮಾಯಾವತಿಯ ಒಂದೆಡೆ ಹಿಮಾಚ್ಛಾದಿತ ಶಿಖರಗಳ ಭವ್ಯ ದೃಶ್ಯ, ಸನಿಹದಲ್ಲೇ ಹರಿಯುವ ಹೊಳೆ, ಹಕ್ಕಿಗಳ ಮಧುರ ಕಲರವದಿಂದ ಕೂಡಿದ ತಂಪಾದ ಗಾಳಿ ಎಲ್ಲರ ಸ್ವೀಕಾರ ಪಡೆಯಿತು. ಸಾಧನೆಗೆ ಪ್ರಶಸ್ತವಾದ ಸನ್ನಿವೇಶ ಹೊಂದಿದ್ದ ಮಾಯಾವತಿ ಎಲ್ಲರ ಅಚ್ಚುಮೆಚ್ಚಾಯಿತು.

ವಿವೇಕಾನಂದರು ೧೯೦೦ರ ಡಿಸೆಂಬರ್ ೯ರಂದು ದ್ವಿತೀಯ ಬಾರಿಯ ವಿದೇಶ ಪ್ರವಾಸದಿಂದ ಭಾರತಕ್ಕೆ ಮರಳಿ ಬಂದರು. ಕ್ಯಾಪ್ಟನ್ ಸೇವಿಯರ್‌ರ ಆರೋಗ್ಯದ ಬಗ್ಗೆ ಅವರಿಗೆ ಕಾಳಜಿ ಮೂಡಿತ್ತು. ಆದರೂ ಅವರು ಹಿಂದಿರುಗುವ ಮುನ್ನವೇ ಕ್ಯಾಪ್ಟನ್ ಸೇವಿಯರ್ ಅಸುನೀಗಿದ್ದರು. ಶ್ರೀಮತಿ ಸೇವಿಯರ್‌ರನ್ನು ಸಂತೈಸಲು ಸ್ವಾಮೀಜಿ ಕೂಡಲೇ ಮಾಯಾವತಿಗೆ ಹೊರಟು ಬಂದರು. ೧೯೦೧ರ ಜನವರಿ ೩ರಂದು ಮಾಯಾವತಿಯನ್ನು ತಲುಪಿದರು. ಅವರ ಸಾನ್ನಿಧ್ಯದಿಂದ ಮಾಯಾವತಿಯ ಆಶ್ರಮದಲ್ಲಿ ಉತ್ಸಾಹದ ಚಿಲುಮೆ ಹರಿಯಿತು. ಹಿಮಾಲಯದಲ್ಲಿ ಆಶ್ರಮ ಸ್ಥಾಪಿಸುವ ಇಚ್ಛೆ ಪೂರ್ಣವಾದುದನ್ನು ಕಂಡು ಅವರಿಗೆ ತೃಪ್ತಿಯಾಯಿತು. ಮಾರ್ಚ್ ೧೯, ೧೮೯೯ರಂದೇ ಉದ್ಘಾಟಿತವಾಗಿದ್ದ ಕೇಂದ್ರದ ಧ್ಯೇಯೋದ್ದೇಶಗಳನ್ನು ಕುರಿತು, ಸ್ವರೂಪಾನಂದರಿಗೆ ಬರೆದ ತಮ್ಮ ಪತ್ರದಲ್ಲಿ ಸ್ವಾಮೀಜಿ ತಿಳಿಸಿದ್ದಾರೆ : 'ಅದ್ವೈತ ಜ್ಞಾನದಿಂದ ಮಾತ್ರವೇ ಮಾನವನು ತನಗೆ ತಾನೇ ಪ್ರಭು ಎಂಬ ಅಭಿಪ್ರಾಯವನ್ನು ಪಡೆಯುತ್ತಾನೆ. ಅದ್ವೈತವೇ ಎಲ್ಲಾ ವಿಧವಾದ ಬಂಧನಗಳಿಂದ ಮತ್ತು ಅವುಗಳಿಂದ ಬರುವ ಮೂಢ ನಂಬಿಕೆಗಳಿಂದ ನಮ್ಮನ್ನು ಪಾರುಮಾಡುವುದು.... ಇದುವರೆಗೆ ಈ ಭವ್ಯ ಸತ್ಯವನ್ನು ದ್ವೈತಭಾವನೆಗಳಿಂದ ಸಂಪೂರ್ಣವಾಗಿ ಬೇರೆ ಮಾಡಿ ಜನರಿಗೆ ಬೋಧಿಸಲು ಆಗಲಿಲ್ಲ... ಈ ಒಂದು ಸತ್ಯ ಯಾವ ಬಂಧನವೂ ಇಲ್ಲದೆ ವ್ಯಾಪಿಸಿ, ವ್ಯಕ್ತಿಗಳನ್ನು ಮತ್ತು ಜನಸಮುದಾಯವನ್ನು ಮೇಲೆತ್ತುವುದಕ್ಕೆ ಸಹಾಯ ಮಾಡಲಿ ಎಂದು ನಾವು ಅದ್ವೈತ ಆಶ್ರಮವನ್ನು, ಹಿಮಾಲಯದ ಮೇಲೆ, ಮೊದಲು ಅದ್ವೈತ ಭಾವವು ಎಲ್ಲಿ ವ್ಯಕ್ತವಾಯಿತೋ ಅಲ್ಲಿ ಸ್ಥಾಪಿಸುವೆವು.... ಪರಿಶುದ್ಧವಾದ ಸರಳವಾದ ಅದ್ವೈತವನ್ನಲ್ಲದೆ ಇಲ್ಲಿ ಬೇರಾವುದನ್ನೂ ಬೋಧಿಸುವುದಿಲ್ಲ; ಅಭ್ಯಾಸ ಮಾಡುವುದಿಲ್ಲ. ಉಳಿದ ಎಲ್ಲಾ ಸಿದ್ಧಾಂತಗಳೊಂದಿಗೆ ಸಹಾನುಭೂತಿಯನ್ನು ತೋರಿದರೂ, ನಾವು ಈ ಆಶ್ರಮವನ್ನು ಅದ್ವೈತಕ್ಕೆ ಮಾತ್ರ ಮೀಸಲಾಗಿಡುವೆವು.' (ಕೃತಿಶ್ರೇಣಿ, ಸಂಪುಟ ೫, ಪುಟ ೩೮೦)

## ಅದ್ವೈತ ಸಾಧನೆಯತ್ತ

ವಿವೇಕಾನಂದರು ಆಶ್ರಮವನ್ನು ನೋಡುತ್ತಿದ್ದಾಗ, ಒಂದು ಸಣ್ಣ ಪೂಜಾಕೊಠಡಿಯೊಂದು ತಯಾರಾಗಿರುವುದನ್ನು ಕಂಡು ಬೇಸರಿಸಿಕೊಂಡು, ತಮ್ಮ ವಿಷಾದವನ್ನು ವ್ಯಕ್ತಪಡಿಸಿದರು. ಸಂಪೂರ್ಣವಾಗಿ ಅದ್ವೈತ ಸಾಧನೆಗೆ ಈ ಆಶ್ರಮವನ್ನು ಮೀಸಲಿಡಬೇಕೆಂಬ ತಮ್ಮ ನಿರ್ಧಾರವನ್ನು ಮತ್ತೊಮ್ಮೆ ತಿಳಿಸಿದರು. ಅಂದಿನಿಂದ ಇಂದಿನವರೆಗೂ ಮಾಯಾವತಿಯು ಈ ಪರಂಪರೆಯನ್ನು ಕಾಪಾಡಿಕೊಂಡು ಬಂದಿದೆ. ತೀವ್ರವಾದ ಚಳಿ, ಏಕಾಂತತೆಯ ಆ ಪರಿಸರದಲ್ಲಿ ದಿನನಿತ್ಯದ ಸೌಕರ್ಯಗಳೇ ಅಲಭ್ಯ. ಇವುಗಳ ಮಧ್ಯೆ ಅಲ್ಲಿಯ ಆಶ್ರಮವಾಸಿಗಳು ನಿಷ್ಠೆಯಿಂದ ಶ್ಲಾಘನೀಯವಾದ ಕೆಲಸಗಳನ್ನು ನಡೆಸುತ್ತಿದ್ದಾರೆ. ಅದ್ವೈತ ಆಶ್ರಮವು ತನ್ನ ಧ್ಯೇಯವನ್ನು ಮೂರು ವಿಧಗಳಲ್ಲಿ ಸಾಧಿಸಬೇಕೆಂದು ಸ್ವಾಮೀಜಿ ಬಯಸಿದ್ದರು. ಮೊದಲನೆಯದಾಗಿ ಅಲ್ಲಿಗೆ ಬರುವ ಸಾಧಕರಿಗೆ ಸರಿಯಾದ ಮಾರ್ಗದರ್ಶನ ನೀಡುವುದು, ಪ್ರವಚನಗಳ ಮೂಲಕ ಭಾರತದ ಆಧ್ಯಾತ್ಮಿಕ ಪರಂಪರೆಯನ್ನು ಪ್ರಚಾರ ಮಾಡುವುದು ಮತ್ತು ಸುಸಜ್ಜಿತವಾದ ಪ್ರಕಟನಾ ವಿಭಾಗವನ್ನು ಪ್ರಾರಂಭಿಸುವುದು. ಎರಡನೆಯದಾಗಿ ಹಳ್ಳಿಗಳಲ್ಲಿ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಶಿಕ್ಷಣ ಸಂಸ್ಥೆಗಳನ್ನು




ಸ್ವಾಮಿ ವಿವೇಕಾನಂದರು ಮಾಯಾವತಿಗೆ ಭೇಟಿಯಿತ್ತಾಗ ತಂಗಿದ ಅದ್ವೈತಾಶ್ರಮದ ಸಾಧುನಿವಾಸದ ವಿಹಂಗಮ ನೋಟ

ಸ್ಥಾಪಿಸುವುದು ಅಥವಾ ವಿದ್ಯೆಯ ಪ್ರಾಮುಖ್ಯವನ್ನು ತಿಳಿಯಪಡಿಸುವುದು. ಮೂರನೆಯದಾಗಿ ಸೇವಾಕಾರ್ಯಗಳನ್ನು ಹಮ್ಮಿಕೊಳ್ಳುವುದು. ಉಚಿತ ಔಷಧೋಪಚಾರ, ಅತಿಥಿಗೃಹಗಳು ಮತ್ತು ಸಾರ್ವಜನಿಕ ಗ್ರಂಥಾಲಯಗಳ ಮೂಲಕ ಈ ಸೇವೆ ನಡೆಯಬೇಕೆಂದು ಸ್ವಾಮೀಜಿ ಬಯಸಿದ್ದರು. ಪ್ರಾರಂಭದ ದಿನದಿಂದಲೇ ಶುರುವಾಯಿತು ನಿರಂತರವಾದ ಸೇವಾಕಾರ್ಯ. ಶ್ರೀಮತಿ ಸೆವಿಯರ್ ಹನ್ನೆರಡು ವರುಷಗಳ ಕಾಲ ಸತತವಾಗಿ ಬೆಂಬಲ ಮತ್ತು ಸಹಕಾರ ನೀಡಿ ವಿದೇಶದಲ್ಲೇ ತಮ್ಮ ಕೊನೆ ಜೀವನವನ್ನು ಕಳೆದರು. ಸ್ವಾಮಿ ಸ್ವರೂಪಾನಂದರು, ಸ್ವಾಮಿ ವಿರಜಾನಂದರಂತಹ ಸಂನ್ಯಾಸಿಗಳ ನೇತೃತ್ವದಲ್ಲಿ ಸೇವೆ ಭರದಿಂದ ಸಾಗಿತು.

ಮಾಯಾವತಿಯ ಅದ್ವೈತ ಆಶ್ರಮವು ಆರಂಭವಾಗಿ ಈಗಾಗಲೇ ಒಂದು ಶತಕವಾಗಿದೆ. ಅಲ್ಲಿನ ಪ್ರಕಟನಾ ವಿಭಾಗವು ಉಪನಿಷತ್ತುಗಳು, ಭಗವದ್ಗೀತೆ, ವಿವೇಕಚೂಡಾಮಣಿ ಮತ್ತಿತರ ಶಾಸ್ತ್ರಗ್ರಂಥಗಳೊಂದಿಗೆ ಶ್ರೀರಾಮಕೃಷ್ಣ ಪರಮಹಂಸರ, ಶ್ರೀ ಮಾತೆ ಶಾರದಾದೇವಿಯವರ ಮತ್ತು ಸ್ವಾಮಿ ವಿವೇಕಾನಂದಾದಿ ಶಿಷ್ಯರ ಜೀವನ, ಬರಹ ಮುಂತಾದ ಕೃತಿಗಳನ್ನು ಹೊರತಂದಿದೆ. ಇಲ್ಲಿಂದ ಪ್ರಕಟಿಸಲ್ಪಡುತ್ತಿರುವ 'ಪ್ರಬುದ್ಧ ಭಾರತ' ಆಂಗ್ಲ ಭಾಷೆಯ ಮಾಸಪತ್ರಿಕೆಯು ತನ್ನ ವಿಚಾರಪೂರ್ಣ ಲೇಖನಗಳಿಗೆ, ವಿಶ್ಲೇಷಣೆಗಳಿಗೆ, ಪ್ರಗತಿಪರ ಬರಹಗಳಿಗೆ, ಪ್ರಸಿದ್ಧವಾಗಿದೆ. ಅದು ಭಾರತದಲ್ಲಿ ಶತಮಾನೋತ್ಸವವನ್ನು ಆಚರಿಸುತ್ತಿರುವ ಪ್ರಪ್ರಥಮ ಆಂಗ್ಲ ಮಾಸಿಕವಾಗಿದೆ. ಮಾಯಾವತಿಯ ಉಚಿತ ಔಷಧಾಲಯವು ಸುತ್ತಮುತ್ತಲಿನ ಹಳ್ಳಿಗಳ ಜನರ ಸೇವೆಯ ಮೂಲಕ ಅಪಾರವಾದ ಜನಪ್ರಿಯತೆಯನ್ನು ಗಳಿಸಿದೆ. ೧೯೦೩ರಲ್ಲಿ ಪ್ರಾರಂಭವಾದ ಈ ಸೇವಾಕಾರ್ಯ ನಿರಂತರವಾಗಿ ನಡೆದಿದೆ. ಯಾವುದೇ ಆಧುನಿಕ ಸೌಲಭ್ಯಗಳನ್ನು ಕಂಡರಿಯದ ಆ ಗುಡ್ಡಗಾಡಿನ ಜನರು ಬಹು ದೂರ ಪ್ರದೇಶಗಳಿಂದ, ಅನೇಕ ಕಷ್ಟಗಳನ್ನು ಸಹಿಸಿಕೊಂಡು, ಮೂರು ನಾಲ್ಕು ದಿನಗಳ ಪ್ರಯಾಣ ಮಾಡಿ ಬರುತ್ತಾರೆ, ರೋಗ ನಿವಾರಣೆಗಾಗಿ. ಅರಣ್ಯಪ್ರದೇಶಗಳಿಗೆ ಸಹಜವಾದ ಕ್ಷಯರೋಗ, ಆಸ್ತಮಾ, ಕ್ರೂರಪ್ರಾಣಿಗಳ ಆಕ್ರಮಣದಿಂದಾದ ಗಾಯಗಳು ಇಂತಹ ಹಲವಾರು ರೋಗಗಳಿಗೆ ಸೂಕ್ತವಾದ ಉಪಚಾರವಷ್ಟೇ ಅಲ್ಲ, ಉಚಿತ ಆಹಾರ ಮತ್ತು ವಸತಿ ಸೌಲಭ್ಯವನ್ನೂ ಒದಗಿಸಿಕೊಡಲಾಗುತ್ತಿದೆ. ಸುಮಾರು ೧೪೦೦ ಗ್ರಾಮಗಳಿಂದ ರೋಗಿಗಳು ಬರುತ್ತಿದ್ದಾರೆ.

ರಾಮಕೃಷ್ಣಸಂಘದ ಸೇವಾಕಾರ್ಯಗಳ ಹಿನ್ನೆಲೆಯಲ್ಲಿರುವ ಆದರ್ಶ ಶಿವಜ್ಞಾನೇ ಜೀವ ಸೇವಾ–ಶಿವನನ್ನು ಆರಾಧಿಸುತ್ತಿದ್ದೇವೆ ಎಂದು ಭಾವಿಸುತ್ತಾ ರೋಗಿಗಳ ದೀನರ ವಿದ್ಯಾರ್ಥಿಗಳ ಪ್ರತಿಯೊಂದು ಜೀವಿಯ ಸೇವೆ ಮಾಡುವುದು. ಈ ದಿಶೆಯಲ್ಲಿ ಮಾಯಾವತಿ ಧೀರ ಸ್ಥಿರಗತಿಯಿಂದ ಮುನ್ನಡೆದಿದೆ. ಮಾಯಾಪ್ರಪಂಚದ ಕಲುಷಿತ ವಾತಾವರಣದಿಂದ, ನಗರ ಜೀವನದ ಗೊಂದಲಗಳಿಂದ ದೂರವಿರುವ ಇದು ಸಂಸಾರದ ಬೇಗೆಯಿಂದ ಬಳಲಿ ಬೇಸತ್ತ ಭಕ್ತಜನರಿಗೆ ಶುಭ್ರ ಪರಿಸರ, ಶಾಂತ ವಾತಾವರಣ ಮತ್ತು ಸುಂದರ ಪ್ರಕೃತಿಯ ಬೆಡಗಿನಿಂದ ಮನಸ್ಸಿಗೆ ಆಹ್ಲಾದವನ್ನು ನೀಡಿ ಸಂತೈಸುತ್ತಿದೆ, ಭಿನ್ನತೆ ವೈಷಮ್ಯಗಳನ್ನು ತನ್ನ ಜ್ಞಾನ ಕಿರಣಗಳಿಂದ ದೂರ ಮಾಡುತ್ತಿದೆ. ಸ್ವಾಮಿ ವಿವೇಕಾನಂದರು ಬಯಸಿದಂತೆ ಈ ಕೇಂದ್ರವು ಅದ್ವೈತ ಸಿದ್ಧಾಂತವನ್ನು ದಿನನಿತ್ಯ ಜೀವನದಲ್ಲಿ ಆಚರಣೆಗೆ ತರುವಲ್ಲಿ ನಿದರ್ಶನವಾಗಿದೆ. ವ್ಯಕ್ತಿಗತ ಜೀವನ ಮತ್ತು ಸಾಮಾಜಿಕ ಏಳ್ಗೆಗೆ ಬೇಕಾದ ಆದರ್ಶ ಇಲ್ಲಿದೆ. ಇದರ ಸದುಪಯೋಗವನ್ನು ಪಡೆದು ನಮ್ಮ ಜೀವನ ಹಸನಾಗಬೇಕು, ಸಫಲವಾಗಬೇಕು. ಇಂದಿನ ಪೀಳಿಗೆಗೆ ವಿವೇಕಾನಂದರ ವತಿಯಿಂದ ಬಂದಿರುವ ವರದಾನವಾಗಿರುವ ಈ ಆಶ್ರಮವು ಸೌಮ್ಯ ಸದ್ಭಾವದಿಂದ ತನ್ನ ನಿರಾಡಂಬರ ಸೇವೆಯನ್ನು ಇನ್ನೂ ಅನೇಕ ಕಾಲ ಸಲ್ಲಿಸಲಿ !



ಒಂದು ಘಟನೆ

# ಮಾಮನುಸ್ಮರ ಯುದ್ಧ್ಯ ಚ

ಸ್ವಾಮಿ ರಾಘವೇಶಾನಂದ

ಇದು ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯ ೮ನೇ ಅಧ್ಯಾಯದ ೭ನೇ ಶ್ಲೋಕದಲ್ಲಿ ಹೇಳಿರುವ ಮಾತು. ಅಂದರೆ 'ನನ್ನನ್ನೇ, ಅಂದರೆ ದೇವರನ್ನೇ ಚಿಂತೆ ಮಾಡುತ್ತಾ ಯುದ್ಧ ಮಾಡು.'

### ಸಾವಿನ ರೂಪ

ಸಾವು ಯಾವಾಗ ಯಾವ ರೂಪದಲ್ಲಿ ಬರುವುದೋ ಅದನ್ನು ಯಾರೂ ಹೇಳುವುದಕ್ಕೆ ಆಗುವುದಿಲ್ಲ. ಆದರೆ ಖಂಡಿತ ಅದು ಪ್ರತಿಯೊಬ್ಬನಿಗೂ ಬಂದೇ ಬರುತ್ತದೆ. ನಮ್ಮ ಕಣ್ಣು ಮುಂದೆ ಹಲವಾರು ಜನರು ಸಾಯುತ್ತಿರುವುದನ್ನು ನಾವು ನೋಡುತ್ತಲೇ ಇದ್ದೇವೆ. ಆದರೆ ನಾವು ಮಾತ್ರ ದೃಢವಾಗಿ ನಂಬಿದ್ದೇವೆ ನಾವು ನಿರಂತರವಾಗಿ ಬದುಕಿರುತ್ತೇವೆಂದು. ಇದೇ ಯಕ್ಷಪ್ರಶ್ನೆಗೆ ಯುಧಿಷ್ಠಿರನು ಕೊಟ್ಟ ಉತ್ತರ. ಏನಪ್ಪಾ, ಅಪಶಕುನವಾದ ಸಾವಿನ ಬಗ್ಗೆ ಚರ್ಚೆ ಮಾಡುತ್ತಿದ್ದಾರಲ್ಲಾ ಎಂದು ಎಣಿಸಬೇಡಿ. ಸುಖ-ದುಃಖ, ಹುಟ್ಟು-ಸಾವು, ಶೀತ-ಉಷ್ಣ ಇಂತಹ ದ್ವಂದ್ವಗಳಿಂದ ತಪ್ಪಿಸಿಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ. ಅದಕ್ಕೇ ಒಬ್ಬ ಪಾಶ್ಚಾತ್ಯ ವೇದಾಂತಿ ಹೇಳುತ್ತಾನೆ, 'ಪ್ರಪಂಚದಲ್ಲಿ ಇಬ್ಬರೇ ವ್ಯಕ್ತಿಗಳು ಸುಖವಾಗಿರುವವರು, ಒಬ್ಬ ಹುಟ್ಟದೇ ಇರುವವನು ಮತ್ತೊಬ್ಬ ಸತ್ತವನು.' ಇವರಿಬ್ಬರ ಮಧ್ಯೆ ನಾವು ಇರುವವರಾದುದರಿಂದ ನಾವು ಮಾಡಬೇಕಾಗಿರುವ ಕರ್ತವ್ಯವೇನು ಎಂದು ಆಲೋಚಿಸೋಣ. ಮತ್ತೊಮ್ಮೆ ಯಾವಾಗಲಾದರೂ ನಾವು ಹೇಗೆ ಹುಟ್ಟಿದೆವು, ಮರಣದ ನಂತರ ಏನು ಕಾದಿದೆ ಎಂಬ ಕುತೂಹಲಕರವಾದ ವಿಷಯವನ್ನು ವಿಮರ್ಶಿಸೋಣ.

ಬೆಂಗಳೂರಿನ ಅಲಸೂರಿನಲ್ಲಿರುವ ವಿವೇಕಾನಂದ ಆಶ್ರಮದ ಅಧ್ಯಕ್ಷರಾಗಿರುವ ಸ್ವಾಮಿ ರಾಘವೇಶಾನಂದರು ಬೋಧಪ್ರದವಾದ ಘಟನೆಯೊಂದನ್ನು ವರ್ಣಿಸಿರುವರು.

### ನಮ್ಮ ಕರ್ತವ್ಯ

ನಾವು ಸತ್ತು ಈ ಲೋಕವನ್ನು ಬಿಟ್ಟು ಹೋಗುವಾಗ, ನಮ್ಮೆಲ್ಲಾ ಆಸ್ತಿಪಾಸ್ತಿಗಳನ್ನೂ, ಬ್ಯಾಂಕ್ ಬ್ಯಾಲೆನ್ಸ್‌ಗಳನ್ನೂ, ನಮಗೆ ಬೇಕಾದ ಆಪ್ತರುಗಳನ್ನೂ, ಎಲ್ಲರನ್ನೂ, ಎಲ್ಲವನ್ನೂ ಹಿಂದೆ ಬಿಟ್ಟೇ ಹೋಗಬೇಕು. ನಮ್ಮ ಜೊತೆಯಲ್ಲಿ ಬರುವುದೆಂದರೆ ಬರೀ ನಾವು ಮಾಡಿರುವ ಪುಣ್ಯ ಪಾಪಗಳು ಮಾತ್ರ. ಬೃಹದಾರಣ್ಯಕ ಉಪನಿಷತ್ತು ಹೇಳುತ್ತದೆ, ನಾವು ಸತ್ತಮೇಲೆ ಬಹುದೂರ ಪ್ರಯಾಣ ಮಾಡಬೇಕು; ಹಾಗೆ ಪ್ರಯಾಣ ಮಾಡುವಾಗ ದಾರಿಯಲ್ಲಿ ನಮ್ಮ ಬುತ್ತಿ ಎಂದರೆ ನಾವು ಸಂಗ್ರಹಿಸಿರುವ ಪುಣ್ಯ ಎಂದು. ನಾವು ಪುಣ್ಯವಂತರಾಗುವುದಕ್ಕೆ ಯಾವ ರೀತಿಯ ಜೀವನ ನಡೆಸಬೇಕು ಎಂಬುದನ್ನು ಶ್ರೀಕೃಷ್ಣ ಬೋಧಿಸುತ್ತಾನೆ.

ಶ್ರೀಕೃಷ್ಣನಿಗೆ ಸಂನ್ಯಾಸಿಗಳಿಗಿಂತ ಸಂಸಾರಿಗಳ ಮೇಲೆ ಒಲವು ಹೆಚ್ಚು. ಅರ್ಜುನ ಸಂನ್ಯಾಸಿಯಾಗಿ ನಿವೃತ್ತಿ ಮಾರ್ಗ ಹಿಡಿಯುತ್ತೇನೆ ಎಂದರೂ ಬಿಡದೆ, ಪ್ರವೃತ್ತಿಮಾರ್ಗ ನಿನ್ನ ಧರ್ಮ, ಅದರಲ್ಲೇ ನೀನು ಭಗವದ್ದರ್ಶನ ಪಡೆಯುವ ಮಾರ್ಗ ತೋರಿಸುತ್ತೇನೆ ಬಾ ಎನ್ನುತ್ತಾ ಮಾಮನುಸ್ಮರ ಯುದ್ಧ್ಯ ಚ, ಎಂದು ಹೇಳಿದ. ಅಂದರೆ ಪ್ರಪಂಚದಲ್ಲಿ ನಾವು ನಮ್ಮ ನಮ್ಮ ಕರ್ತವ್ಯಗಳನ್ನು ಮಾಡುತ್ತಲೇ ಭಗವಂತನನ್ನು ನೆನೆಯುವುದು ಸಾಧ್ಯ, ಹಾಗೆ ನೆನೆಯಬೇಕು ಎಂದು ಒತ್ತಿ ಹೇಳಿದ್ದಾನೆ. ನಮಗೆಲ್ಲಾ ಬರುವ ಸಂದೇಹವೆಂದರೆ ಒಂದೇ ಕಾಲದಲ್ಲಿ ನಮ್ಮ ಮನಸ್ಸನ್ನು ಎರಡು ವಿಷಯಗಳ ಮೇಲೆ ಅಂದರೆ ಭಗವಂತನ ಮೇಲೆ ಹಾಗೂ ನಮ್ಮ ಕರ್ತವ್ಯದ ಮೇಲೆ ಹರಿಸಲು ಸಾಧ್ಯವೇ?

### ಕರ್ಮದಲ್ಲಿ ಕೌಶಲ

ನಮ್ಮ ಶ್ರೀರಾಮಕೃಷ್ಣಾಶ್ರಮದ ಒಬ್ಬ ಬ್ರಹ್ಮಚಾರಿಗೆ ಒಮ್ಮೆ ಈ ಸಂದೇಹ ಬಂದಿತು. ಆತ ಭಗವದ್ಗೀತೆಯ ಪರಮ ಭಕ್ತ. ಗೀತೆಯ ಉಪದೇಶಗಳನ್ನು ಜೀವನದಲ್ಲಿ ತರಲು ಸತತವಾಗಿ ಪ್ರಯತ್ನಿಸುತ್ತಿದ್ದ. ಯೋಗಃ ಕರ್ಮಸು ಕೌಶಲಮ್ ಎಂಬ ಗೀತೆಯ ಕರ್ಮಯೋಗರಹಸ್ಯಸೂತ್ರ ಅವನಿಗೆ ಅತ್ಯಂತ ಪ್ರಿಯವಾದುದಾಗಿತ್ತು. ಕೆಲಸ ಮಾಡುವಾಗ ಪೂರ್ಣ ಮನಸ್ಸನ್ನು ಆ ಕಾಲಕ್ಕೆ, ಆ ಕೆಲಸದಲ್ಲಿಟ್ಟು ಶ್ರದ್ಧೆಯಿಂದ ಮಾಡುವುದೇ ಯೋಗದ

ತಸ್ಮಾತ್ ಸರ್ವೇಷು ಕಾಲೇಷು ಮಾಮನುಸ್ಮರ ಯುದ್ಧ್ಯ ಚ |
ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ||

ಆದುದರಿಂದ ಎಲ್ಲಾ ಕಾಲದಲ್ಲೂ ನನ್ನನ್ನೇ ಸ್ಮರಿಸುತ್ತಿರು ಮತ್ತು ಯುದ್ಧ ಮಾಡು. ನನಗೆ ಮನಸ್ಸು ಬುದ್ಧಿಗಳನ್ನು ಸಮರ್ಪಿಸಿ ನನ್ನನ್ನೇ ಹೊಂದುವೆ. ಇದರಲ್ಲಿ ಸಂಶಯವಿಲ್ಲ.

ಭಗವದ್ಗೀತಾ ೮.೭.

ರಹಸ್ಯ ಎಂದು ಅರಿತಿದ್ದ. ಅವನಿಗೆ ಮಾಮನುಸ್ಮರ ಯುದ್ಧ್ಯ ಚ ಎಂಬುದನ್ನು ಓದಿದಾಗ ಸಂಶಯ ತಲೆಹೊಕ್ಕಿತು. ಈ ರೀತಿಯ ಸಂಶಯಗಳು ಹಲವಾರು ವಿವರಣೆಗಳಿಗೆ, ಬೆಳಕಿಗೆ ದಾರಿಯಾಗುತ್ತವೆ. ಅರ್ಜುನನಿಗೆ ಸಂಶಯದ ಮೇಲೆ ಸಂಶಯ ಬಂದಿದ್ದುದರಿಂದಲ್ಲವೇ ನಮಗೆ ಇಂತಹ ಅದ್ಭುತ ಗೀತೆ ದೊರಕಿರುವುದು!

## ಪರಿಪ್ರಶ್ನೆ– ಸೇವೆ

ಸರಿ, ಆ ಬ್ರಹ್ಮಚಾರಿ ಇರುವ ಆಶ್ರಮದಲ್ಲಿ ಒಬ್ಬರು ವೃದ್ಧ, ಜ್ಞಾನಿ ಸಂನ್ಯಾಸಿಗಳಿದ್ದರು. ಇವನು ಭಯ ಭಕ್ತಿಯಿಂದ ಅವರ ಬಳಿ ಹೋಗಿ ತನ್ನ ಸಂಶಯವನ್ನು ಅರುಹಿದ: 'ಸ್ವಾಮೀಜಿ, ಕೆಲಸಕ್ಕೆ ಮುಂಚೆ ಅಥವಾ ಕೆಲಸ ಮುಗಿದ ಮೇಲೆ ಭಗವಂತನನ್ನು ನೆನೆಯಲು ಸಾಧ್ಯ. ಆದರೆ ಕೆಲಸ ಮಾಡುವಾಗಲೂ ಅವನನ್ನು ನೆನೆಯ ಬೇಕೆಂದರೆ, ಕೆಲಸ ಕೆಡಬಹುದು. ಅದು ಸಾಧ್ಯವೇ?' ಆ ಸ್ವಾಮೀಜಿ ಯವರು ಅವನನ್ನು ತಲೆ ಎತ್ತಿ ನೋಡಿದರು. ನಿಧಾನವಾಗಿ, ಗೀತೆ ಯಲ್ಲಿ ಶ್ರೀಕೃಷ್ಣ ಅರ್ಜುನನತ್ತ ನೋಡಿ 'ಪ್ರಹಸನ್ನಿವ', ಅಂದರೆ ಮೃದು ಹಾಸ್ಯದಿಂದ ಹೇಳಿದಹಾಗೆ, ಸ್ವಾಮೀಜಿಯವರು ಆ ಬ್ರಹ್ಮಚಾರಿಗೆ ಹೇಳಿದರು, 'ಶ್ರೀಕೃಷ್ಣ ಪರಮಾತ್ಮ ಹೇಳಿದ್ದಾನೆಂದರೆ ಅದು ಖಂಡಿತ ಸತ್ಯ. ಚೆನ್ನಾಗಿ ಆಲೋಚಿಸು, ಅದರ ಮೇಲೆ ಧ್ಯಾನ ಮಾಡು. ಆಗ ಅರ್ಥವಾಗುತ್ತದೆ' ಎಂದು. ಎರಡು ಮೂರು ದಿನದ ನಂತರ ಆ ಬ್ರಹ್ಮಚಾರಿ ಮತ್ತೆ ಬಂದು 'ಸ್ವಾಮೀಜಿ, ಅರ್ಥವಾಗಲಿಲ್ಲ' ಎಂದಾಗ ಅವರು, 'ಸರಿ, ನನಗೂ ವಯಸ್ಸಾಗುತ್ತಾ ಬರುತ್ತಿದೆ. ನಿನಗೆ ಸಮಯವಿದ್ದಲ್ಲಿ, ತೊಂದರೆಯಾಗದಿದ್ದಲ್ಲಿ ನನ್ನ ಕೋಣೆಯನ್ನು ಪ್ರತಿದಿನ ಸ್ವಲ್ಪ ಗುಡಿಸಿ, ಸಾರಿಸಲಿಕ್ಕಾಗುತ್ತದೆಯೆ?' ಎಂದು ಕೇಳಿದರು. ಬ್ರಹ್ಮಚಾರಿ ವೃದ್ಧರ ಸೇವೆ ಮಾಡುವ ಪುಣ್ಯ ದೊರೆಯಿತಲ್ಲಾ ಎಂದು ಸಂತೋಷದಿಂದ ಒಪ್ಪಿಕೊಂಡ.

ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮನ ಉಪದೇಶದ ಪ್ರಕಾರ ಎಲ್ಲ ವಿದ್ಯೆಯನ್ನೂ 'ಪರಿಪ್ರಶ್ನೇನ ಸೇವಯಾ' ಅಂದರೆ ಗುರುವನ್ನು ಪ್ರಶ್ನಿಸುವುದರಿಂದಲೂ, ಅವರ ಸೇವೆಯಿಂದಲೂ, ಪಡೆಯಬೇಕು. ಬ್ರಹ್ಮಚಾರಿ ಪ್ರಶ್ನೆಯನ್ನು ಕೇಳಿದ್ದಾಗಿತ್ತು. ಈಗ ಸೇವೆ ಮಾಡುವ ಸುಯೋಗವೂ ದೊರೆತಿತ್ತು. ಪ್ರತಿದಿನ ಸ್ವಾಮಿಗಳು ಅವರ ಕೋಣೆಯಲ್ಲಿಲ್ಲದಿರುವಾಗ ಬ್ರಹ್ಮಚಾರಿ ಬಂದು ಅವರ ಕೋಣೆ ಯನ್ನು ಶುದ್ಧಗೊಳಿಸುತ್ತಿದ್ದ. ಹೀಗೆ ನಾಲ್ಕು ಐದು ದಿನಗಳು ಕಳೆದವು. ಆರನೆಯ ದಿನ ಆ ಸ್ವಾಮೀಜಿಯವರು ದೂರದಲ್ಲಿ ನಿಂತು ಇವನು ಮಾಡುತ್ತಿದ್ದ ಕೆಲಸವನ್ನೇ ಗಮನಿಸುತ್ತಿದ್ದರು. ಸ್ವಲ್ಪ ಹೊತ್ತಾದ ಮೇಲೆ ಬ್ರಹ್ಮಚಾರಿ ತಲೆ ಎತ್ತಿದಾಗ ಇವರು ದೂರದಲ್ಲಿ ನಿಂತು ಗಮನಿಸುತ್ತಿರುವುದನ್ನು ನೋಡಿ ಮನದಲ್ಲಿ ಸ್ವಲ್ಪ ಆತಂಕ ಮೂಡಿತು. ತಾನು ಸರಿಯಾಗಿ ಸಾರಿಸುತ್ತಿದ್ದೇನೆಯೆ ಇಲ್ಲವೇ ಎಂಬುದರ ಕಡೆಗೆ ಗಮನ ಹರಿದು ಇನ್ನೂ ನಿಷ್ಠೆಯಿಂದ ಸಾರಿಸಲು ಶುರು ಮಾಡಿದ. ಇಂದು ಅವನಿಗೆ ಅವನ ಕೆಲಸದಲ್ಲಿ ಹೆಚ್ಚು ತೃಪ್ತಿಯಿತ್ತು. ಎರಡು ಮೂರು ದಿನ ಹೀಗೆಯೇ ನಡೆಯಿತು. ಪ್ರತಿ ಬಾರಿಯೂ ಅವರನ್ನು ದೂರದಲ್ಲಿ ಗಮನಿಸಿದಾಗ ಕೈ ಹಾಗೂ ಮನಸ್ಸು ಹೆಚ್ಚು ಚುರುಕಾಗುತ್ತಿತ್ತು.

> **ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ |**
> **ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ||**
>
> ಅದನ್ನು ದೀರ್ಘನಮಸ್ಕಾರದಿಂದಲೂ ಪರಿಪ್ರಶ್ನೆಯಿಂದಲೂ ಗುರು ಶುಶ್ರೂಷೆಯಿಂದಲೂ ತಿಳಿದುಕೊ. ತತ್ತ್ವವನ್ನು ಅರಿತ ಜ್ಞಾನಿಗಳು ನಿನಗೆ ಜ್ಞಾನವನ್ನು ಉಪದೇಶ ಮಾಡುವರು.
>
> ಭಗವದ್ಗೀತಾ ೪.೩೪

## ಶ್ರದ್ಧೆ– ಜಾಗರೂಕತೆ

ಹೀಗೆ ಮತ್ತೆರಡು ಮೂರು ದಿನಗಳಾದ ಮೇಲೆ, ಆ ಸ್ವಾಮೀಜಿ ಯವರು ಅವನನ್ನು ಕರೆದು ಮಾತನಾಡಿಸಿದರು. ಅವರು ಹೇಳಿದರು, 'ಮಗೂ, ಇನ್ನುಮೇಲೆ ನನ್ನ ಕೆಲಸವನ್ನು ನಾನೇ ಮಾಡಿಕೊಳ್ಳುತ್ತೇನೆ. ನಿನ್ನ ಉಪಕಾರಕ್ಕೆ ಧನ್ಯವಾದಗಳು.'ಎಂದು. ಅವರ ವರ್ತನೆ ಗೊತ್ತಿದ್ದ ಬ್ರಹ್ಮಚಾರಿ ಸರಿ ಎಂದು ಅವರಿಗೆ ನಮಸ್ಕರಿಸಿ ನಿಧಾನವಾಗಿ ಮತ್ತೆ ತನ್ನ ಪ್ರಶ್ನೆಯನ್ನು ಕೇಳಿದಾಗ ಅವರು ನಕ್ಕರು. 'ಇನ್ನೂ ನಿನಗೆ ಉತ್ತರ ದೊರೆಯಲಿಲ್ಲವೆ?' ಎಂದರು. ಆತ ತಲೆಯಲ್ಲಾಡಿಸಿದ. ಆಗ ಅವರು 'ಮಗೂ, ನೀನು ಮಾಡುತ್ತಿದ್ದ ಆ ಗುಡಿಸುವ ಕೆಲಸದಲ್ಲಿ, ನೀನೇ ಮಾಡುವಾಗಲೂ, ಹಾಗೂ ನಾನು ದೂರದಲ್ಲಿ ನಿಂತು ನೋಡುತ್ತಿದ್ದಾಗ ಮಾಡುವಾಗಲೂ, ಏನಾದರೂ ವ್ಯತ್ಯಾಸ ತೋರಿಬಂತೆ?'ಎಂದರು. ಅದಕ್ಕೆ ಆತ ಯೋಚಿಸಿ ಹೇಳಿದ, 'ಖಂಡಿತ ಸ್ವಾಮೀಜಿ, ನಿಮ್ಮನ್ನು ನೋಡಿ ದಾಗಲೆಲ್ಲಾ ನಾನು ಹೆಚ್ಚು, ಹೆಚ್ಚು ಶ್ರದ್ಧೆಯಿಂದ, ಜಾಗರೂಕನಾಗಿ ಕೆಲಸ ಮಾಡುತ್ತಿದ್ದೆ. ' 'ಆ, ಅಷ್ಟೇ ನೋಡು ವ್ಯತ್ಯಾಸ. ನೀನು ಪ್ರತಿ ಕಾರ್ಯ ಮಾಡುವಾಗಲೂ ಭಗವಂತ ದೂರದಿಂದ ನನ್ನನ್ನು ನೋಡುತ್ತಿದ್ದಾನೆ ಎನ್ನುವುದನ್ನು ಮನಸ್ಸಿನಲ್ಲಿಟ್ಟುಕೊ. ಆಗ "ಮಾಮನುಸ್ಮರ" ಆಗುತ್ತದೆ. ನಿನ್ನ ಕೆಲಸವೂ ಇನ್ನೂ ಉತ್ತಮ ಮಟ್ಟದ್ದಾಗಿರುತ್ತದೆ' ಎಂದು ಹೇಳಿದರು.

ಸ್ವಾಮೀಜಿಯವರ ಮುಖದಲ್ಲಿದ್ದ ನಗುವಿನ ಮಿಂಚು ಆ ಬ್ರಹ್ಮಚಾರಿಯ ಮನಸ್ಸಿನಲ್ಲಿ ಜ್ಞಾನದ ಅಮೃತ ವರ್ಷವನ್ನೇ ತಂದಿತು.



> **ತನಗಿಷ್ಟವಾದ ಕೆಲಸವನ್ನು ಮಾಡುವುದೇನೂ ದೊಡ್ಡದಲ್ಲ. ಆದರೆ ಯಾರು ಯಾವ ಕೆಲಸವನ್ನಾದರೂ ತನಗಿಷ್ಟವಾದ ಕೆಲಸದಂತೆ ಮಾರ್ಪಡಿಸಬಲ್ಲನೊ ಅವನೇ ಶ್ರೇಷ್ಠ.**
>
> — ಸ್ವಾಮಿ ವಿವೇಕಾನಂದ

## ಯುವ ವೇದಿಕೆ

# ಅಯಸ್ಕಾಂತೀಯ ಯುವಶಕ್ತಿ

ಸ್ವಾಮಿ ಪುರುಷೋತ್ತಮಾನಂದ

### ಶಕ್ತಿಸಾಗರ!

**ಯೌವನ**ವೆಂಬುದೊಂದು ಶಕ್ತಿಸಾಗರ! ಮುಂದೆ ಭವ್ಯವಾದ ಜೀವನವನ್ನು ರೂಪಿಸಿಕೊಳ್ಳಲೆಂದೇ ಯುವಕನಲ್ಲಿ ಸಾಕಷ್ಟು ಶಕ್ತಿಯನ್ನು ತುಂಬಿಟ್ಟಿದ್ದಾನೆ ಭಗವಂತ. ಆದರೆ ಯುವಕನಿಗೆ ಮಾತ್ರ ಆ ಶಕ್ತಿಯ ಅರಿವಿಲ್ಲದಾಗಿದೆ. ಮಹಾಬಲವಂತನಾದ ಹನುಮಂತನಿಗೂ ತನ್ನ ಸಾಮರ್ಥ್ಯದ ಅರಿವು ಇಲ್ಲದ್ದರಿಂದಲೇ ಆ ವಿಶಾಲವಾರಿಧಿಯನ್ನು ಲಂಘಿಸಲು ತನ್ನಿಂದ ಸಾಧ್ಯವಾಗಲಾರದು ಎಂದು ಶಂಕಿಸಿದ. ಆದರೆ ಇತರರು ಅವನ ಶಕ್ತಿಯನ್ನು ಅವನಿಗೆ ನೆನಪಿಸಿಕೊಟ್ಟಾಗ ಒಂದೇ ನೆಗೆತಕ್ಕೆ ಸಾಗರವನ್ನು ದಾಟಿದ.

**ಯುವಕರು** ತಮ್ಮ ಶಕ್ತಿ ಸಾಮರ್ಥ್ಯವನ್ನೂ ಜವಾಬ್ದಾರಿಯನ್ನೂ ಅರಿತು ವಿವೇಕಪೂರ್ಣವಾದ ಮತ್ತು ಪರಿಶುದ್ಧವಾದ ಜೀವನವನ್ನು ನಡೆಸಬೇಕೆಂದು ಸ್ವಾಮಿ ಪುರುಷೋತ್ತಮಾನಂದರು ಹೇಳುತ್ತಾರೆ. ಸ್ವಾಮೀಜಿಯವರು ಪೊನ್ನಂಪೇಟೆಯ ರಾಮಕೃಷ್ಣ ಶಾರದಾಶ್ರಮದ ಅಧ್ಯಕ್ಷರಾಗಿರುವರು. ಅವರು ಯುವಕರಿಗೆ ಮಾರ್ಗದರ್ಶಕವಾದ ಹಲವು ಕೃತಿಗಳನ್ನು ರಚಿಸಿರುವರು.

ನಮ್ಮ ಯುವಕರ ಶಕ್ತಿಸಾಮರ್ಥ್ಯಗಳನ್ನು ನಾವಿಂದು ಅವರಿಗೆ ನೆನಪಿಸಿಕೊಡಬೇಕಾಗಿದೆ. ಮಹತ್ತರವಾದ ಪ್ರತಿಭೆಗಳನ್ನು ಬೆಳೆಸಿಕೊಳ್ಳಲು, ಪ್ರಚಂಡವಾದ ಕಾರ್ಯಸಾಮರ್ಥ್ಯವನ್ನು ಹೊಂದಲು, ತನ್ಮೂಲಕ ಪರಿಪೂರ್ಣ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ನಮ್ಮ ನವಯುವಕರು ಮುಂದಾಗಬೇಕು. ಯುವಕರು ಏನನ್ನು ಬೇಕಾದರೂ ಸಾಧಿಸಬಹುದು. ಆದರೆ ಗುರಿಯನ್ನು ಸಿದ್ಧಿಸಿಕೊಳ್ಳಲು ಸೂಕ್ತವಾದ ಮಾರ್ಗವೊಂದನ್ನು ಮೊಟ್ಟಮೊದಲು ಕಂಡುಕೊಳ್ಳಬೇಕು. ಉದಾಹರಣೆಗೆ ಶರೀರವನ್ನು ಬೆಳೆಸಿ ಭೀಮಕಾಯರಾಗಬೇಕೆಂದು ಬಯಸಿದರೆ ವ್ಯಾಯಾಮದ ರಹಸ್ಯವನ್ನರಿತು ಅನುದಿನ ಅಭ್ಯಾಸ ನಡೆಸಬೇಕು ಮತ್ತು ಪೌಷ್ಟಿಕ ಆಹಾರಸೇವನೆಯ ಮರ್ಮವನ್ನರಿತಿರಬೇಕು. ಬೌದ್ಧಿಕಶಕ್ತಿಯನ್ನು ಬೆಳೆಸಿಕೊಂಡು ಮೇಧಾವಿಗಳಾಗಬೇಕೆಂದರೆ, ಪ್ರಾಜ್ಞರ ಸಹವಾಸ, ಕ್ರಮವಾದ ಅಧ್ಯಯನ ಹಾಗೂ ಶ್ರವಣ ಮನನ ನಿದಿಧ್ಯಾಸನ ನಡೆಸಬೇಕು. ಹಾಗೆಯೇ ಯಾವುದೇ ಬಗೆಯ ಪ್ರತಿಭೆಯನ್ನು ಬೆಳೆಸಿಕೊಳ್ಳಬೇಕೆಂದುಕೊಂಡರೂ ಅದಕ್ಕೆ ಸಂಬಂಧಿಸಿದ ತಂತ್ರಗಳನ್ನು ತಿಳಿದು ಅಳವಡಿಸಿಕೊಳ್ಳಬೇಕು, ರೀತಿನೀತಿಗಳನ್ನು ಅರಿತು ಆಚರಿಸಬೇಕು. ಆದರೆ ಆಲಸ್ಯ ಅಲಕ್ಷ್ಯ ಅವಿವೇಕ ಇವುಗಳು ಮನದೊಳಗೆ ಮನೆಮಾಡಿರುವವರೆಗೆ ಯಾವುದನ್ನೂ ಸಾಧಿಸಲಾಗುವುದಿಲ್ಲ. ಯೌವನದಲ್ಲಿ ಬೆಂಕಿಯ ಬಿಸಿಯಿರುವುದರಿಂದ ಅಲ್ಲಿ ಆಲಸ್ಯಕ್ಕೆ ಅವಕಾಶವಿರಲಾರದು. ಆದರೆ ಇಂದು ಯುವಕರು ತಮ್ಮ ಅಮೂಲ್ಯವಾದ ಸಮಯ ಹಾಗೂ ಶಕ್ತಿಯನ್ನು ವ್ಯರ್ಥಗೊಳಿಸುತ್ತಿರುವುದನ್ನು ನೋಡಿದರೆ ಅವರಲ್ಲಿ ಆಲಸ್ಯವಿಲ್ಲದಿದ್ದರೂ ಅವಿವೇಕವಂತೂ ತುಂಬಿಕೊಂಡಿದೆಯೆಂಬುದು ಎದ್ದು ಕಾಣುತ್ತಿದೆ.

### ಯುಕ್ತ ಮಾರ್ಗದರ್ಶನ

ಅಸಂಖ್ಯ ಯುವಜನತೆಗೆ ಯುಕ್ತ ಮಾರ್ಗದರ್ಶನ ನೀಡಲು ಸಾಕಷ್ಟು ಸಂಖ್ಯೆಯ ಪ್ರಾಜ್ಞ ಹಿರಿಯರೇ ಬೇಕಾಗುತ್ತದೆ. ಆದರೆ ಇಂದು ವಯಸ್ಸಿನಿಂದ ಹಿರಿಯರಾದವರು ಇದ್ದಾರೆಯೇ ಹೊರತು ವಿಚಾರದಿಂದ ಹಿರಿಯರಾದವರು ವಿರಳ. ಹೀಗಿರುವಾಗ ಸುಮ್ಮನೆ ಕಣ್ಮುಚ್ಚಿಕೊಂಡು ಓಡುತ್ತಿರುವ ಯುವಕರ ಕಣ್ತೆರೆಸಿ ಅವರಿಗೆ ದಿಕ್ಕುತೋರಿಸುವವರಾರು?

ಆದರೆ ನಮ್ಮ ಯುವಕರು ಮಾರ್ಗದರ್ಶಕರನ್ನು ಹುಡುಕಿಕೊಂಡು ಎಲ್ಲಿಗೂ ಅಲೆಯಬೇಕಿಲ್ಲ. ಅವರು ಮೊದಲೊಂದಿಷ್ಟು ಉತ್ತಮ ಗಂಥಗಳನ್ನು ಆರಿಸಿಕೊಳ್ಳಬೇಕು. ಬಳಿಕ ಮನಸ್ಸನ್ನು ಅತ್ತಿತ್ತ ಅಲೆಯಲು ಬಿಡದೆ ಅವುಗಳ ಆಳವಾದ ಅಧ್ಯಯನದಲ್ಲಿ ಮುಳುಗಿಬಿಡಬೇಕು, ಮತ್ತು ಗ್ರಹಿಸಿದ ಒಂದೊಂದು ಅಂಶವನ್ನೂ ದೈನಂದಿನ ನಡವಳಿಕೆಯಲ್ಲಿ ಪ್ರತಿಬಿಂಬಿಸಲು ಪ್ರಯತ್ನಿಸಬೇಕು. ಕೆಲವೇ ವರ್ಷಗಳಲ್ಲಿ ಆ ಯುವಕರು ವಿವೇಕಸಂಪನ್ನ ಪ್ರಜೆಗಳಾಗಿ ಅರಳುವುದು ಖಂಡಿತ.

### ಯುವಕ – ವಿವೇಕ

ಯುವಕ! ಎಂಥ ಚಮತ್ಕಾರದ ಶಬ್ದವಿದು! ಈ ಶಬ್ದ ಕಿವಿಯ ಮೇಲೆ ಬಿದ್ದಾಕ್ಷಣವೇ ಮನದಲ್ಲಿ ಒಂದು ನವಸ್ಫೂರ್ತಿ ಸಂಚರಿಸಿದಂತಾಗುವುದಿಲ್ಲವೆ! ಧೈರ್ಯ ಸ್ಫೂರ್ತಿ ಉತ್ಸಾಹಗಳ ಪ್ರತೀಕ ಈ ಯುವಕ. ಮೈಬಗ್ಗಿದ ಮುದುಕರೂ ಒಮ್ಮೆ ಸೆಟೆದು ನೆಟ್ಟಗೆ ನಿಲ್ಲುವಂತೆ ಮಾಡುವ ಶಬ್ದವಿದು– ಯುವಕ!

ಸಮಾಜಕ್ಕೆ ಸಮಾಜವೇ, ರಾಷ್ಟ್ರಕ್ಕೆ ರಾಷ್ಟ್ರವೇ ಯುವಕರ ಮೇಲೆ ಭರವಸೆಯಿಟ್ಟು, ಮುಂದೇನಾದರೂ ಮಹತ್ತರವಾದುದು ಸಿದ್ಧಿಸಬೇಕಾದರೆ ಅದು ಈ ಯುವಕರಿಂದಲೇ ಆಗಬೇಕಾಗಿದೆ ಎಂದು ನಿರೀಕ್ಷಿಸುತ್ತಿದೆ. ಸತ್ಯವಾಗಿಯೂ ಪವಾಡಸದೃಶ ಕಾರ್ಯವನ್ನೂ

ಲೀಲಾಜಾಲವಾಗಿ ಮಾಡಿ ಹೆಮ್ಮೆಯಿಂದ ಮುಗುಳ್ನಗುತ್ತ ನಿಲ್ಲಬಲ್ಲ ಸಾಮರ್ಥ್ಯವಿರುವುದು ಈ ಯುವಕನಲ್ಲಿ.

ಎಷ್ಟು ಶ್ರಮಿಸಿದರೂ ಆಯಾಸದ ಅರಿವೇ ಆಗದಂತೆ ಮಾಡುವ ಹೊಚ್ಚ ಹೊಸ ರಕ್ತ ಹರಿಯುತ್ತಿರುವುದು ಈ ಯುವಕನಲ್ಲಿ.

ಕರ್ಮಕ್ಷೇತ್ರದ ಕಠಿಣ ಪ್ರಸಂಗಗಳನ್ನು ಎದುರಿಸುವಾಗ ಸಹಜವಾಗಿಯೇ ಒಮ್ಮೊಮ್ಮೆ ಸೋಲೊಪ್ಪುವ ಸಂದರ್ಭ ಬಂದರೂ ಸಾಹಸಗೆಡದೆ, ಏನೇ ಆಗಲಿ, ಈ ಸಲ ಸಾಧಿಸಿಯೇ ಸಿದ್ಧ ಎಂಬ ಧೀರಮನೋಭಾವದಿಂದ ಮತ್ತೊಮ್ಮೆ ಮುನ್ನುಗ್ಗಬಲ್ಲ ಹುಮ್ಮಸ್ಸು ಇರುವುದು ಈ ಯುವಕನಲ್ಲಿ.

ಧರ್ಮ, ಸಾಹಿತ್ಯ, ಕಲೆ, ವಿಜ್ಞಾನ, ಕೃಷಿ, ಕೈಗಾರಿಕೆ ಮತ್ತು ತಾಂತ್ರಿಕತೆ ಇಂತಹ ನೂರಾರು ಸೃಜನಾತ್ಮಕ ವಿಷಯಗಳಲ್ಲಿ ತರಬೇತಿ ಪಡೆಯಲು, ತರಬೇತಿ ಪಡೆದು ಕಾರ್ಯೋನ್ಮುಖರಾಗಲು, ಕಾರ್ಯೋನ್ಮುಖರಾಗಿ ಲೋಕೋತ್ತರ ಯಶಸ್ಸನ್ನು ಗಳಿಸಲು ಅತ್ಯಾವಶ್ಯಕವಿರುವ ಹಚ್ಚಹಸಿರು ಬುದ್ಧಿಯಿರುವುದು ಈ ಯುವಕನಲ್ಲಿ.

### ಅನಂತ ಅವಕಾಶ

ಯುವಕನ ಮುಂದೆ ಅನಂತ ಅವಕಾಶ ಅರಳಿ ನಿಂತಿದೆ. ಆದರೆ ಅವಕಾಶವನ್ನು ಸದುಪಯೋಗಗೊಳಿಸಿಕೊಳ್ಳಲು ಬೇಕಾದ ವಿವೇಕವನ್ನು ಮಾತ್ರ ಅವನು ಗಳಿಸಿಕೊಳ್ಳಬೇಕಾಗಿದೆ. ಯುವಕನಲ್ಲಿ ಶರೀರಶಕ್ತಿ, ಮನಶ್ಶಕ್ತಿ, ಉತ್ಸಾಹಶಕ್ತಿ, ಕ್ರಿಯಾಶಕ್ತಿ ಎಲ್ಲವೂ ಇವೆ. ಇವುಗಳೊಂದಿಗೆ, ಇವೆಲ್ಲವನ್ನೂ ಸಫಲವಾಗಿಸಬಲ್ಲ ವಿವೇಕವನ್ನು ಸೇರಿಸಿಕೊಳ್ಳದಿದ್ದರೆ ಮಾತ್ರ ಎಲ್ಲವೂ ವಿಫಲ!

**ವಿವೇಕ ಎಂದರೇನು? ಅದು, ಒಳ್ಳೆಯದು ಯಾವುದು, ಕೆಟ್ಟದ್ದು ಯಾವುದು ಎನ್ನುವುದರ ತಾರತಮ್ಯ ಜ್ಞಾನ.** ತಾನು ಮಾಡಬೇಕಾದದ್ದು ಯಾವುದು, ಮಾಡಬಾರದ್ದು ಯಾವುದು; ತಾನು ಪಡೆಯಬೇಕಾದದ್ದು ಯಾವುದು, ಬಿಡಬೇಕಾದದ್ದು ಯಾವುದು ; ಯಾವುದರ ಕಡೆಗೆ ಕಣ್ಣುಗಳು ತೆರೆದಿರಬೇಕು, ಯಾವುದರಿಂದ ಕಣ್ಣುಗಳನ್ನು ತಿರುಗಿಸಬೇಕು – ಎಂಬೀ ತೆರನಾದ ವಿವೇಚನೆ ಯುವಕನಲ್ಲಿ ಇರಬೇಕಾದುದು ಅತಿ ಮುಖ್ಯ.

ಮಾಡಬೇಕಾದ್ದನ್ನು ಮಾಡದಿದ್ದರೆ ಅಪಾರ ನಷ್ಟವಾಗುತ್ತದೆ, ಮಾಡಬಾರದ್ದನ್ನು ಮಾಡಿದರೆ ಆಗಬಾರದ್ದು ಆಗುತ್ತದೆ.

ಪಡೆಯಬೇಕಾದ್ದನ್ನು ಪಡೆಯದಿದ್ದರೆ ಪುರುಷಾರ್ಥವೇನು ಬಂತು? ಬಿಡಬೇಕಾದ್ದನ್ನು ಬಿಡದಿದ್ದಲ್ಲಿ ಉದ್ಧಾರವಾಗುವುದೆಲ್ಲಿ ಬಂತು?

ಪ್ರಕೃತಿಸೌಂದರ್ಯವನ್ನು ನೋಡಬೇಕು– ಹೃದಯ ಅರಳುತ್ತದೆ. ನಕ್ಷತ್ರಲೋಕದ ವಿಚಿತ್ರಗಳ ಕಡೆಗೆ ದೃಷ್ಟಿ ಹರಿಯಿಸಬೇಕು – ಭಾವನೆಗಳು ಗರಿಗೆದರುತ್ತವೆ. ಅನಂತವಾದ ಘನಗಂಭೀರ ಸಾಗರದತ್ತ ಕಣ್ಣಾರಳಿಸಬೇಕು– ಉತ್ಸಾಹ ಸಾಹಸಗಳು ಉಕ್ಕುತ್ತವೆ. ಆದರೆ ಮನಸ್ಸನ್ನು ಚಂಚಲಗೊಳಿಸುವ, ಬುದ್ಧಿಯನ್ನು ಪಲ್ಲಟಗೊಳಿಸುವ ಯಾವುದೇ ವಸ್ತುವನ್ನೂ ನೋಡದೆ ಕಣ್ಣುಗಳನ್ನು ತಕ್ಷಣ ಅಲ್ಲಿಂದ ತಿರುಗಿಸಿಬಿಡಬೇಕು.

ಇದು ಯುವಕನು ಗಳಿಸಬೇಕಾದ ವಿವೇಕ.

### ಯುವಕನ ಆಸ್ತಿ

ಯೌವನದ ರಹಸ್ಯವೇನು?– ಬ್ರಹ್ಮಚರ್ಯ! ಭಾರತದ ಆರ್ಯಋಷಿಗಳು ಕಂಡುಹುಡುಕಿದಂತಹ ಪವಾಡಪೂರ್ಣ ಶಬ್ದವಿದು –ಬ್ರಹ್ಮಚರ್ಯ!! ಭಾರತದ ಸಂಸ್ಕೃತಿ-ವೈಭವವನ್ನು ಅಂದು ಉತ್ತುಂಗ ಶಿಖರಕ್ಕೆ ಏರಿಸಿದ ಶಕ್ತಿ– ಬ್ರಹ್ಮಚರ್ಯ! ಇಂದು ನೆಲಸಮವಾಗಿರುವ ಅದೇ ಸಂಸ್ಕೃತಿ-ವೈಭವವನ್ನು ಮೇಲೆತ್ತಬಲ್ಲ ಶಕ್ತಿ – ಬ್ರಹ್ಮಚರ್ಯ!

ಬ್ರಹ್ಮಚರ್ಯದ ಮಹಿಮೆಯನ್ನು ವಿಶೇಷವಾಗಿ ವಿವರಿಸುತ್ತ ಹೋದಾಗ ಸಾಮಾನ್ಯವಾಗಿ ಒಂದು ಪ್ರಶ್ನೆ ತಲೆಯೆತ್ತುವುದು ಕಂಡುಬರುತ್ತದೆ– 'ಹಾಗಾದರೆ ವಿವಾಹವಾಗುವುದು ಅಪರಾಧವೆ?' ಎಂಬುದೇ ಆ ಸರ್ವೇಸಾಧಾರಣ ಪ್ರಶ್ನೆ. ಆದರೆ ನಿಜಕ್ಕೂ ಈ ಪ್ರಶ್ನೆಯೇಳಬೇಕಾದ ಅಗತ್ಯವೇ ಇಲ್ಲ. ಏಕೆಂದರೆ ಈ ವಿವಾಹವೆಂಬುದು ಅನಾದಿಯಿಂದಲೂ ಸರ್ವಮಾನ್ಯವಾಗಿರುವ ಒಂದು ಸುವ್ಯವಸ್ಥೆ. ಆದರೆ ಇಲ್ಲಿ ಇನ್ನೊಂದು ಅಂಶವನ್ನು ಮರೆಯಬಾರದು, ಏನೆಂದರೆ ಬ್ರಹ್ಮಚರ್ಯ ಎನ್ನುವುದು ಅವಿವಾಹಿತರಿಗೆ ಅತ್ಯಂತ ಆವಶ್ಯಕವಾದರೆ ವಿವಾಹಿತರಿಗೆ ಅದು ಕೆಲಮಟ್ಟಿಗಾದರೂ ಬೇಕಾಗುತ್ತದೆ. ಏಕೆಂದರೆ, ವಿವಾಹವಾದಾಕ್ಷಣ ಕೇವಲ ಭೋಗದಲ್ಲೇ ಮುಳುಗಿರುವುದಲ್ಲ. ಊಟಮಾಡುವುದು ಸಹಜವೆಂದ ಮಾತ್ರಕ್ಕೆ ಹೊಟ್ಟೆಬಾಕನಾಗಬೇಕೆಂದಿಲ್ಲವಲ್ಲ!

ಇದೇ ಸಂದರ್ಭದಲ್ಲಿ ಮತ್ತೊಂದು ವಿಷಯವನ್ನು ಸ್ಪಷ್ಟಪಡಿಸಿಯೇ ಮುಂದುವರಿಯಬೇಕಾಗಿದೆ:

ಮಂಗಳಕರವಾಗಿ ವಿವಾಹ ಮಾಡಿಕೊಂಡು ವ್ಯವಸ್ಥಿತವಾದ ಗೃಹಸ್ಥ ಜೀವನ ನಡೆಸುವುದು ಯಾವ ಆದರ್ಶಕ್ಕೂ ಕಡಮೆಯದೇನಲ್ಲ. ಆಲೋಚಿಸಿ ನೋಡಿದರೆ, ಬ್ರಹ್ಮಚಾರಿಗಳು ಸಂನ್ಯಾಸಿಗಳು ಹಾಗೂ ಇತರೆಲ್ಲ ಸಾಧುಸಂತರು ಹೊರಬಂದದ್ದು ಗೃಹಸ್ಥರ ಮನೆಗಳಿಂದಲೇ ಅಲ್ಲವೇ? ಆದರೆ ಅವರು ಎಂತಹ ಬ್ರಹ್ಮಚಾರಿಗಳು ಎಂಬುದು, ಸಾಮಾನ್ಯತಃ ಅವರು ಎಂತಹ ಗೃಹಸ್ಥರ ಮನೆಯಿಂದ ಬಂದವರು ಎಂಬ ಅಂಶವನ್ನು ಅವಲಂಬಿಸಿರುತ್ತದೆ.

ಸಕಲ ಯಶಸ್ಸಿಗೂ ಮೂಲಕಾರಣವಾದ ಈ ಬ್ರಹ್ಮಚರ್ಯದ ಬಗ್ಗೆ ನಮ್ಮ ಯುವಕ-ಯುವತಿಯರೆಲ್ಲರೂ ಸ್ಪಷ್ಟವಾಗಿ ತಿಳಿದಿರಬೇಕು ಎಂಬುದು ಪ್ರಾಜ್ಞರ, ವಿವೇಕಿಗಳ ಆಕಾಂಕ್ಷೆ. ಯುವಕ ಒಮ್ಮೆ ಕೆಡಲಾರಂಭಿಸಿದರೆ ಉದ್ಧಾರದ ದಾರಿ ಬಹು ಕಠಿಣವಾದ್ದರಿಂದ ಮೊದಲಿನಿಂದಲೇ ಈ ವಿಷಯವನ್ನು ತಿಳಿದು ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಯತ್ನದಲ್ಲಿ ತೊಡಗಬೇಕಾಗಿದೆ. ಬ್ರಹ್ಮಚರ್ಯವೇ ಜೀವನದ ಸಾರ, ಯೌವನದ ಮೂಲ. ಹೀಗಿದ್ದೂ ಈ ಬ್ರಹ್ಮಚರ್ಯದ ಬಗ್ಗೆ ಯುವಕರಿಗೆ ತಿಳಿಸಲು ಹಿರಿಯರು ಹಿಂಜರಿಯುತ್ತಿದ್ದಾರೆ. ಇದಕ್ಕೆ ಕಾರಣವಿಲ್ಲದಿಲ್ಲ. ಏಕೆಂದರೆ ಬ್ರಹ್ಮಚರ್ಯದ ಬಗ್ಗೆ ಅವರಿಗೇ ಖಚಿತ ಕಲ್ಪನೆ

ಯಿಲ್ಲದಿರುವುದು; ಅಥವಾ, 'ಮಗ ಸಂನ್ಯಾಸಿಯಾಗಿಬಿಟ್ಟರೆ?' ಎಂಬ ನಿರಾಧಾರ ಹೆದರಿಕೆ! ಆದರೆ ಬ್ರಹ್ಮಚರ್ಯಪಾಲನೆ ಮಾಡಿದಾಕ್ಷಣ ಒಬ್ಬನು ಸಂನ್ಯಾಸಿಯಾಗಬೇಕಿಲ್ಲ, ಆಗುವುದು ಸಾಧ್ಯವೂ ಇಲ್ಲ. ಏಕೆಂದರೆ ಸಂನ್ಯಾಸಿಯಾಗಬೇಕಾದರೆ ಅಂತರಂಗ ದಲ್ಲಿ ವೈರಾಗ್ಯ ಧಗಧಗಿಸುತ್ತಿರಬೇಕು. ಇಂತಹ ವೈರಾಗ್ಯ ಎಲ್ಲರಿಗೂ ಬರುವಂಥದಲ್ಲ, ಅಲ್ಲವೇ ಅಲ್ಲ. ಆದರೆ 'ನಮ್ಮ ಮಗ ಸಂನ್ಯಾಸಿ ಯಾದರೇನು ಗತಿ?' ಎಂಬ ಈ ವ್ಯರ್ಥಭೀತಿಯಿಂದಾಗಿ ಬ್ರಹ್ಮ ಚರ್ಯದ ಕಡೆಗೆ ಗಮನ ಹರಿಸದಿದ್ದರೆ ತಮ್ಮ ಮಕ್ಕಳು ಮುಂದೆ ಯಶಸ್ವಿಯಾದ ಗೃಹಸ್ಥಜೀವನದ ಸೌಖ್ಯವನ್ನು ಅನುಭವಿಸಲೂ ಅಸಮರ್ಥರಾಗುವರೆಂಬ ಕಟುಸತ್ಯವನ್ನು ತಿಳಿದಿರಬೇಕು. ಆದಾಗಲೇ ಹೇಳಿದಂತೆ ಹೇಗೆ ಶ್ರೇಷ್ಠಗೃಹಸ್ಥರ ಮನೆಗಳಿಂದ ಮಾತ್ರವೇ ಉತ್ತಮ ಬ್ರಹ್ಮಚಾರಿಗಳು ಬರಲು ಸಾಧ್ಯವೋ ಹಾಗೆಯೇ ಉತ್ತಮ ಬ್ರಹ್ಮಚಾರಿಗಳು ಮಾತ್ರವೇ ಮುಂದೆ ಶ್ರೇಷ್ಠ ಗೃಹಸ್ಥರಾಗಲು ಸಾಧ್ಯ. ಈ ದೃಷ್ಟಿಯಿಂದ ನೋಡಿದಾಗ ಸಶಕ್ತ ಸಮಾಜನಿರ್ಮಾಣಕ್ಕೂ ಬ್ರಹ್ಮಚರ್ಯವೇ ಮೂಲಾಧಾರವೆಂಬುದನ್ನು ನಾವು ಮರೆಯು ವಂತಿಲ್ಲ.

ಬ್ರಹ್ಮಚರ್ಯಪಾಲನೆಯ ಸಂಬಂಧವಾಗಿ ಇನ್ನೊಂದು ಸಮಸ್ಯೆ ಮುಂದೆ ಬಂದು ನಿಲ್ಲುತ್ತದೆ. ಏನೆಂದರೆ ಬ್ರಹ್ಮಚರ್ಯಪಾಲನೆ ಯೆಲ್ಲ ಈ ಲೋಕದಲ್ಲಿ ಯಾರಿಂದಲೂ ಆಗದ ಮಾತು ಎಂದು ಹೇಳುವವರ ಸಂಖ್ಯೆಯೇ ಅಧಿಕ; ಆಧುನಿಕ ಡಾಕ್ಟರುಗಳೂ ಮನೋ ವಿಜ್ಞಾನಿಗಳೂ ಈ ಮಾತನ್ನು ಪುಷ್ಟೀಕರಿಸುತ್ತಾರೆ; ಆದ್ದರಿಂದ ಬ್ರಹ್ಮಚರ್ಯಪಾಲನೆ ಮಾಡುವವರ ಸಂಖ್ಯೆ ಕಡಿಮೆಯಾಗುತ್ತಾ ಬಂದು ನಶಿಸಿಯೇ ಹೋಗುವಂತೆ ಕಾಣುತ್ತಿದೆ! ಬ್ರಹ್ಮಚರ್ಯ ಪಾಲನೆಯೆಂಬುದು ಮೊದಲೇ ಅತಿ ಕಷ್ಟಕರವಾದ ಕಾರ್ಯ. ಇನ್ನು ಸಮಾಜದ ಜನರೊಂದಿಗೆ ಡಾಕ್ಟರುಗಳೂ ಮನೋವಿಜ್ಞಾನಿಗಳೂ ನಿರುತ್ಸಾಹಗೊಳಿಸತೊಡಗಿದಾಗ ಅದು ಇನ್ನಷ್ಟು ಕಷ್ಟಕರವಾಗಿ ಬಿಡುತ್ತದೆ. ಇಂದಿನ ಸಮಾಜದಲ್ಲಿ ಬ್ರಹ್ಮಚರ್ಯವೆಂಬುದೊಂದು ಹಾಸ್ಯಾಸ್ಪದ ವಿಷಯವಾಗಿ ಅಥವಾ ಭಯದ ವಿಷಯವಾಗಿ ಪರಿ ಣಮಿಸಿಬಿಟ್ಟಿದೆ.

ಹೀಗಾಗುವುದಕ್ಕೆ ಕಾರಣವಿಲ್ಲದಿಲ್ಲ. ಎಂತೆಂಥ ಮಹಾ ಯೋಗಿ ಗಳೂ ತಪತಪನೆ ಪತನ ಹೊಂದಿದ ಸಂಗತಿಗಳು ಪುರಾಣಕಾಲ ದಿಂದಲೂ ಕೇಳಿ ಬರುತ್ತಿವೆ. ಅದು ನಿಜವೇ. ಆದರೆ ಆ ಕಾರಣಕ್ಕಾಗಿ ಲಂಗು ಲಗಾಮಿಲ್ಲದ ಜೀವನ ನಡೆಸಬಹುದು ಎಂದರ್ಥ ಮಾಡಿ ಕೊಳ್ಳಬೇಕಾಗಿಲ್ಲವಲ್ಲ! ಎತ್ತರದತ್ತ ಏರುವ ಮನುಷ್ಯ ಆಗಾಗ ಜಾರುವುದು ಸಹಜವೇ. ಹಾಗೆಂದು ಮೇಲೇರುವ ಯತ್ನವನ್ನೇ ಮಾಡದೆ ಮಣ್ಣಿನ ಮೇಲೆ ಮಲಗಿರುವವನೇ ಮೇಲು ಎನ್ನ ಲಾದೀತೆ?

ಆದ್ದರಿಂದ ಯುವಜನಾಂಗವು ಸದ್ಗ್ರಂಥಗಳಿಂದಲೋ ಸಜ್ಜನ ರಿಂದಲೋ ಮಾರ್ಗದರ್ಶನ ಪಡೆಯುತ್ತ ಸರ್ವಾಂಗಸುಂದರ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಪಣ ತೊಡಬೇಕು, ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕು.



# ಉತ್ತಮ ಜೀವನದ ಹತ್ತು ಸೂತ್ರಗಳು.

ಜೀವನವನ್ನು ಒಂದು ಗಿಡಕ್ಕೆ ಹೋಲಿಸುತ್ತಾರೆ. ಗಿಡಕ್ಕೆ ನೀರು ಗೊಬ್ಬರ ಗಾಳಿ ಬೆಳಕು ಇತ್ಯಾದಿಗಳನ್ನಿತ್ತು ಸುತ್ತ ಬೇಲಿಯನ್ನು ಕಟ್ಟಿ ರಕ್ಷಣೆಯನ್ನು ನೀಡಿದರೆ ಅದು ಹುಲುಸಾಗಿ ಬೆಳೆದು ಉತ್ತಮ ಹೂ ಫಲಗಳನ್ನು ನೀಡುತ್ತದೆ. ಹೀಗೆಯೆ ನಮ್ಮ ಜೀವನವೂ ಉತ್ತಮವಾಗಿ ಬೆಳೆದು ಫಲಪ್ರದವಾಗಬೇಕಾದರೆ ಅದನ್ನು ಕೆಲವು ಗುಣಗಳ ಮೂಲಕ ಪುಷ್ಟಿಗೊಳಿಸಬೇಕು. ಪರಿಣಾಮಕಾರಿಯಾದ ಜೀವನ ನಡೆಸಲು ಬೇಕಾದ ಮುಖ್ಯವಾದ ಹತ್ತು ಸಾಮರ್ಥ್ಯಗಳನ್ನು ವಿಶ್ವ ಆರೋಗ್ಯ ಸಂಸ್ಥೆಯು **(WHO)** ಗುರುತಿಸಿದೆ.

## ೧. ನಿರ್ಣಯ ಸಾಮರ್ಥ್ಯ (Decision making)

ಮನಸ್ಸು ಉದ್ವೇಗಕ್ಕೆ ಒಳಗಾಗಿದ್ದರೆ ಯಾವುದೇ ವಿಷಯ ದಲ್ಲಾದರೂ ಒಂದು ನಿರ್ದಿಷ್ಟ ನಿರ್ಣಯಕ್ಕೆ ಬರುವುದು ಕಷ್ಟವಾಗುತ್ತದೆ. ಮನಸ್ಸು ಡೋಲಾಯಮಾನ ಸ್ಥಿತಿಯಲ್ಲಿ ರುತ್ತದೆ— to be or not to be, that is the question—ಎಂಬ ಅವಸ್ಥೆಯಲ್ಲಿರುತ್ತದೆ. ಒಂದು ನಿರ್ಣಯಕ್ಕೆ ಬಂದರೂ ಅದು ತಪ್ಪು ನಿರ್ಣಯವಾಗಿರುತ್ತದೆ. ಆದ್ದರಿಂದ ಮನಸ್ಸು ತಿಳಿಯಾಗಿರುವುದು ಮುಖ್ಯ. ಒಂದು ಶಿಸ್ತಿನ ಜೀವನ ನಡೆಸುತ್ತಿದ್ದರೆ ಯಾವುದೇ ಸಂದರ್ಭದಲ್ಲಾದರೂ ಯಾವುದೇ ವಿಷಯದಲ್ಲಾದರೂ ಒಂದು ನಿರ್ಣಯಕ್ಕೆ ಬರುವುದು ಸುಲಭವಾಗುತ್ತದೆ. ಏಕೆಂದರೆ ಆಗ ಒಂದು ನಿರ್ದಿಷ್ಟತೆ ಇರುತ್ತದೆ, ನಾವೇನು ಮಾಡಬೇಕೆಂಬುದು ನಮಗೆ ಸ್ಪಷ್ಟವಾಗಿ ಗೊತ್ತಿರುತ್ತದೆ.

## ೨. ಸಮಸ್ಯಾ ಪರಿಹಾರ (Problem solving)

ಜೀವನದಲ್ಲಿ ನಾವು ಅನೇಕ ಸಮಸ್ಯೆಗಳನ್ನು ಎದುರಿಸ ಬೇಕಾಗುತ್ತದೆ. ಯುವಕರಿಗೆ ತಮ್ಮದೇ ವೈಯಕ್ತಿಕ ಸಮಸ್ಯೆ ಗಳಿರುತ್ತವೆ. ಗೃಹಸ್ಥರಾದರೆ ಸಾಂಸಾರಿಕ ಸಮಸ್ಯೆಗಳಿರುತ್ತವೆ, ಇವಲ್ಲದೆ ಔದ್ಯೋಗಿಕ ಸಮಸ್ಯೆಗಳಿರುತ್ತವೆ. ಯಾವ ಸಮಸ್ಯೆಯೂ ಇಲ್ಲದಿದ್ದರೆ ಜೀವನ ಸ್ವಾರಸ್ಯವಾಗಿರುವುದಿಲ್ಲ. ಸಮಸ್ಯೆಗಳನ್ನು ಎದುರಿಸುತ್ತಲೇ ನಮ್ಮ ಮನಸ್ಸು ಶಕ್ತಿಯುತವಾಗುತ್ತದೆ. ಕುಸ್ತಿಯ

ಪಟು ಕುಸ್ತಿಮಾಡುತ್ತಲೇ ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಾನೆ. ಹಾಗೆಯೇ ಸಮಸ್ಯೆಗಳೊಡನೆ ಸೆಣಸಿಯೇ ಶಕ್ತಿಶಾಲಿಗಳಾಗಬೇಕು. ನಾವು ಸಮಸ್ಯೆಗಳಿಂದ ದೂರವಾಗಲು ಪ್ರಯತ್ನಿಸಿದರೆ ಉತ್ತಮರಾಗುವ ಅವಕಾಶವನ್ನು ಕಳೆದುಕೊಳ್ಳುತ್ತೇವೆ. ನಾವು ಈಜು ಕಲಿಯಬೇಕಾದರೆ ನೀರಿಗೆ ಧುಮುಕಲೇಬೇಕು. ಎಷ್ಟೋ ವೇಳೆ ನಮಗೆ ನಾವೇ ಸಮಸ್ಯೆಯಾಗಿರುತ್ತೇವೆ. ಆಗ ನಾವು ಎಲ್ಲರಿಗೂ ಸಮಸ್ಯೆಯಾಗುತ್ತೇವೆ. ಮೊದಲು ನಮ್ಮನ್ನು ನಾವು ಸರಿಪಡಿಸಿಕೊಂಡರೆ ಬೇರೆಲ್ಲ ಸಮಸ್ಯೆಗಳನ್ನು ಎದುರಿಸುವುದು ಸುಲಭವಾಗುತ್ತದೆ.

### ೩. ವಿಮರ್ಶಾತ್ಮಕ ಚಿಂತನೆ (Critical thinking)

ಸ್ವತಂತ್ರ ಆಲೋಚನಾ ಶಕ್ತಿ ಇಲ್ಲದಿದ್ದರೆ ನಾವು ಬಹುಬೇಗ ಇತರರ ಪ್ರಭಾವಕ್ಕೆ ಒಳಗಾಗುತ್ತೇವೆ, ಅಂಧಾನುಕರಣೆ ಮಾಡುತ್ತೇವೆ, ಗಾಳಿ ಬಂದತ್ತ ಹಾರಾಡುವ ತರಗೆಲೆಯಂತೆ ನಮ್ಮ ಜೀವನವಾಗುತ್ತದೆ. ಎಲ್ಲವನ್ನೂ ವಿಮರ್ಶಿಸಿ ಸ್ವೀಕರಿಸಬೇಕು. ದೇಹವು ಆಹಾರವನ್ನು ಅದರ ಮೂಲ ರೂಪದಲ್ಲಿ ಸ್ವೀಕರಿಸುವುದಿಲ್ಲ. ತನ್ನ ಜೀರ್ಣಕ್ರಿಯೆಯ ಮೂಲಕ ಅದನ್ನು ತನಗನುಕೂಲವಾದ ರೀತಿಯಲ್ಲಿ ಪರಿವರ್ತಿಸಿ, ಬೇಡವಾದುದನ್ನು ಹೊರಕ್ಕೆ ಹಾಕಿ ಬೇಕಾದುದನ್ನು ಮಾತ್ರ ಸ್ವೀಕರಿಸುತ್ತದೆ. ಹೀಗೆಯೇ ನಮ್ಮ ವಿಚಾರಶಕ್ತಿಯ ಮೂಲಕ ಚೆನ್ನಾಗಿ ವಿಮರ್ಶಿಸಿ ಯಾವುದನ್ನಾದರೂ ಸ್ವೀಕರಿಸಬೇಕು. ಇಲ್ಲದಿದ್ದರೆ ವಿವಿಧ ಪ್ರಭಾವಗಳಿಗೆ ಒಳಗಾಗಿ ನಮ್ಮ ಜೀವನ ಗೊಂದಲಮಯವಾಗುತ್ತದೆ.

### ೪. ರಚನಾತ್ಮಕ ಚಿಂತನೆ (Creative thinking)

ನಮ್ಮಲ್ಲೆಲ್ಲರಲ್ಲಿಯೂ ಏನನ್ನಾದರೂ ಸೃಷ್ಟಿಸುವ ಸಾಮರ್ಥ್ಯವಿರುತ್ತದೆ. ಇದನ್ನು ರಚನಾತ್ಮಕ ರೀತಿಯಲ್ಲಿ ಬಳಸಿಕೊಳ್ಳಬೇಕು. ಒಂದು ಮನೆಯನ್ನು ಕಟ್ಟುವ ಆಲೋಚನೆ ಮಾಡಬೇಕೇ ಹೊರತು ಕೆಡುಹುವ ಆಲೋಚನೆ ಮಾಡಬಾರದು. ಒಂದು ಕುಟುಂಬ ಅಥವಾ ಸಂಸ್ಥೆಯಲ್ಲಿರುವಾಗ ಅದು ಉತ್ತಮವಾಗಲು ಮತ್ತು ಶಾಂತ ರೀತಿಯಲ್ಲಿ ಮುಂದುವರಿಯಲು ನಾನೇನು ಮಾಡಬಲ್ಲೆ ಎಂದು ಆಲೋಚಿಸಬೇಕು. ಒಂದು ಕುಟುಂಬ ಅಥವಾ ಸಂಸ್ಥೆಯ ಸುಸ್ಥಿತಿ ಅದರ ಪ್ರತಿಯೊಬ್ಬ ವ್ಯಕ್ತಿಯನ್ನು ಅವಲಂಬಿಸಿರುತ್ತದೆ. ಒಬ್ಬ ಸಮಸ್ಯಾತ್ಮಕ ವ್ಯಕ್ತಿ ಒಂದು ಕುಟುಂಬ ಅಥವಾ ಸಂಸ್ಥೆಯ ಶಾಂತಿಯನ್ನು ಕೆಡಿಸಲು ಸಾಕು. ಬುದ್ಧನು ಅಂಗುಲಿಮಾಲನನ್ನು ಸಂಧಿಸಿದಾಗ ಅವನು ಕತ್ತಿಯನ್ನು ಝಳಪಿಸುತ್ತ ಬುದ್ಧನನ್ನು ಕೊಲ್ಲಲು ಮುನ್ನುಗ್ಗುತ್ತಾನೆ. ಆಗ ಬುದ್ಧ ಸ್ವಲ್ಪವೂ ವಿಚಲಿತನಾಗದೆ, 'ಅಲ್ಲಿರುವ ಮರದ ಕೊಂಬೆಯನ್ನು ಮೊದಲು ಕತ್ತರಿಸು' ಎನ್ನುತ್ತಾನೆ. ಅಂಗುಲಿಮಾಲ ಹಾಗೆಯೇ ಮಾಡಿದಾಗ 'ಆ ಕೊಂಬೆಯನ್ನು ಪುನಃ ಮರಕ್ಕೇ ಜೋಡಿಸು' ಎನ್ನುತ್ತಾನೆ. 'ಇದು ಹುಚ್ಚುತನ' ಎಂದು ಅಂಗುಲಿಮಾಲ ಗರ್ಜಿಸುತ್ತಾನೆ. ಆಗ ಬುದ್ಧ ಹೇಳುತ್ತಾನೆ: 'ಹಾಗೆಯೇ ಧ್ವಂಸಮಾಡುವುದು ಬಾಲಕತನ. ಮಕ್ಕಳು ಕೈಗೆ ಸಿಕ್ಕಿದುದನ್ನೆಲ್ಲ ಮುರಿದುಹಾಕುತ್ತವೆ. ರಚನಾತ್ಮಕ ಕ್ರಿಯೆ ಪ್ರೌಢನ ಲಕ್ಷಣ.' ಹೊಸ ರೀತಿಯಲ್ಲಿ ಆಲೋಚಿಸುವುದನ್ನು, ಹೊಸ ದೃಷ್ಟಿಕೋನದಿಂದ ವಿಷಯಗಳನ್ನು ನೋಡುವುದನ್ನು, ಹೊಸ ಬಗೆಯಲ್ಲಿ ಕೆಲಸ ಮಾಡುವುದನ್ನು ಮತ್ತು ಹೊಸ ವಿಧಾನಗಳನ್ನು ಕಂಡು ಹಿಡಿಯುವುದನ್ನು ಪ್ರಯತ್ನಪೂರ್ವಕವಾಗಿ ಅಭ್ಯಾಸ ಮಾಡಬೇಕು —ಪ್ರಾರಂಭದಲ್ಲಿ ತಪ್ಪಿದರೂ ಪರವಾಗಿಲ್ಲ.

### ೫. ಪರಿಣಾಮಕಾರಿ ಸಂವಾದ (Effective communication)

ನಮ್ಮ ಭಾವನೆಗಳನ್ನು ಮತ್ತು ವಿಚಾರಗಳನ್ನು ಸ್ಪಷ್ಟವಾಗಿ, ತಪ್ಪು ಕಲ್ಪನೆಗೆ, ಗೊಂದಲಕ್ಕೆ ಅವಕಾಶವಿಲ್ಲದಂತೆ ವ್ಯಕ್ತಪಡಿಸುವ ಸಾಮರ್ಥ್ಯವನ್ನು ಪಡೆದಿರಬೇಕು. ನಾವಾಡುವ ಮಾತಿನ ಮೇಲೆ ಹೆಚ್ಚು ನಿಗ ಇರಬೇಕು. ಇತರರಿಗೆ ಯಾವುದಾದರೂ ವಿಷಯವನ್ನು ತಿಳಿಸಿಕೊಡುವಾಗ ಅವರಿಗಾಗಲೇ ವಿಷಯ ತಿಳಿದಿರುವುದೆಂದು ಊಹಿಸಿಕೊಂಡು, ವಿಷಯವನ್ನು ವಿವರವಾಗಿ ತಿಳಿಸುವುದೇ ಇಲ್ಲ. ಇನ್ನು ಕೆಲವೊಮ್ಮೆ ಅವರಿಗೆ ಏನೂ ತಿಳಿದಿಲ್ಲವೆಂದು ಊಹಿಸಿಕೊಂಡು ಅನವಶ್ಯಕ ವಿವರಗಳನ್ನು ನೀಡಿ ಹೆಚ್ಚು ಗೊಂದಲವನ್ನುಂಟುಮಾಡುತ್ತೇವೆ. ನಾವು ಇತರರಿಗೆ ಒಂದು ಕೆಲಸವನ್ನು ಹೇಳುವಾಗ ಪೂರ್ಣವಿವರಣೆಯನ್ನು ನೀಡದೆ ಇದ್ದರೆ ನಾವು ಹೇಳಿರುವುದೇ ಒಂದು ಮಾಡಿರುವುದೇ ಒಂದು ಆಗುತ್ತದೆ. ಇನ್ನು ಕೆಲವರು ಸರಳವಾದ ಕೆಲಸವನ್ನೂ ಅತ್ಯಂತ ಸಂಕೀರ್ಣ ರೀತಿಯಲ್ಲಿ ವಿವರಿಸಿ ಹೇಳಿ ಮಾಡುವವರನ್ನು ದಿಗ್ಭ್ರಮೆಗೊಳಿಸುತ್ತಾರೆ. ನಾವು ಹೇಳಬೇಕಾದುದನ್ನು ಮಿತಭಾಷೆಯಲ್ಲಿ ಸ್ಪಷ್ಟವಾಗಿ ಪರಿಣಾಮಕಾರಿಯಾಗಿ ಹೇಳುವುದೊಂದು ಶ್ರೇಷ್ಠ ಕಲೆ.

### ೬. ಪರಸ್ಪರ ಸಂಬಂಧ (Interpersonal relationship):

ಸಮಾಜದಲ್ಲಿ ಯಾರೂ ಸಂಪೂರ್ಣ ಪ್ರತ್ಯೇಕವಾಗಿ ಇರಲು ಸಾಧ್ಯವಾಗುವುದಿಲ್ಲ. ನಾವು ಇತರರೊಡನೆ ಹಲವು ಬಗೆಯ ಸಂಬಂಧಗಳನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ. ಇದು ನಮ್ಮ ಮಾನಸಿಕ ಸ್ವಾಸ್ಥ್ಯಕ್ಕೆ ಅತ್ಯಂತ ಆವಶ್ಯಕ. ನಮ್ಮ ವೈಯಕ್ತಿಕತೆಯನ್ನು ತೊರೆದು ಇತರರೊಡನೆ ಸ್ಪಂದಿಸುವ ಸಾಮರ್ಥ್ಯವನ್ನು ಪಡೆದಿರಬೇಕು. ಇತರರ ಸಲಹೆ ಮತ್ತು ಭಾವನೆಗಳನ್ನು ಸ್ವೀಕರಿಸುವ ಭಾವವೈಶಾಲ್ಯವನ್ನು ನಾವು ಪಡೆದಿರಬೇಕು. ದೇಹದ ಎಲ್ಲ ಅಂಗಾಂಗಗಳು ಪರಸ್ಪರ ಸಹಕಾರದಿಂದ ಕೆಲಸ ಮಾಡುವವರೆಗೆ ದೇಹ ಸ್ವಸ್ಥವಾಗಿರುತ್ತದೆ. ಹಾಗೆಯೆ ಸಮಾಜವೂ ಕೂಡ. ದೇಹದ ಒಂದು ಅಂಗವನ್ನು ಇಡೀ ದೇಹದಿಂದ ಪ್ರತ್ಯೇಕಿಸಿದಾಗ ಅದು ತನ್ನ ಅರ್ಥವನ್ನು ಕಳೆದುಕೊಳ್ಳುತ್ತದೆ, ಸೊರಗಿ ನಾಶವಾಗುತ್ತದೆ. ಹಾಗೆಯೇ ನಾವು ಸಮಾಜದೊಡನೆ, ವ್ಯಕ್ತಿಗಳೊಡನೆ ಸಂಬಂಧವನ್ನು ಇಟ್ಟುಕೊಳ್ಳದೆ ನಮ್ಮನ್ನು ನಾವು ಪ್ರತ್ಯೇಕಿಸಿಕೊಂಡರೆ ನಮ್ಮ ವ್ಯಕ್ತಿತ್ವದ ಬೆಳವಣಿಗೆ ಕುಂಠಿತವಾಗುತ್ತದೆ. ಆದರೆ ಆ ಸಂಬಂಧ ಪ್ರೀತಿಯ ಸಂಬಂಧವಾಗಿರಬೇಕು. ಕೆಲವರು ಇತರರನ್ನು ತಮ್ಮ ಅಧೀನ ಮಾಡಿಕೊಂಡು ಅವರನ್ನು ಆಳುತ್ತಾರೆ; ಮತ್ತೆ ಕೆಲವರು ತಮ್ಮನ್ನು ಇತರರಿಗೆ ಸ್ವಾಧೀನಪಡಿಸಿಕೊಂಡು ತಮ್ಮನ್ನು ತಾವು ಅಳಿಸಿಕೊಳ್ಳುತ್ತಾರೆ. ಪರಸ್ಪರ ಪ್ರೀತಿ ವ್ಯಕ್ತಿಗೌರವದಿಂದ ಕೂಡಿದ ಸಂಬಂಧ ಆವಶ್ಯಕ.

## ೭. ಆತ್ಮಪ್ರಜ್ಞೆ (self-awareness):

ಯಂತ್ರವು ಅದ್ಭುತ ಕೆಲಸ ಮಾಡುತ್ತದೆ, ಅದು ಮನುಷ್ಯನಿಗಿಂತ ಹೆಚ್ಚು ದಕ್ಷರೀತಿಯಲ್ಲಿ ಕೆಲಸ ಮಾಡಬಹುದು. ಆದರೆ ಅದಕ್ಕೆ ತಾನು ಏನು ಮಾಡುತ್ತಿರುವೆನೆಂಬುದರ ಪ್ರಜ್ಞೆ ಇರುವುದಿಲ್ಲ. ಹಾಗೆಯೆ ನಾವು ಹೆಚ್ಚಿನ ಸಂದರ್ಭಗಳಲ್ಲಿ ಯಾಂತ್ರಿಕವಾಗಿ ಆಲೋಚಿಸುತ್ತೇವೆ, ಮಾತನಾಡುತ್ತೇವೆ ಮತ್ತು ಕೆಲಸ ಮಾಡುತ್ತೇವೆ. ನಮ್ಮ ಮನಸ್ಸಿನಲ್ಲಿ ಏನು ಆಲೋಚನೆಗಳೇಳುತ್ತಿವೆ ಎಂಬುದರ ಅರಿವೇ ನಮಗಿರುವುದಿಲ್ಲ. ನಾವು ಒಂದು ಕೆಲಸ ಮಾಡುವಾಗ 'ನಾನು ಮಾಡುತ್ತಿದ್ದೇನೆ' ಎಂಬ ಅರಿವೇ ಇರುವುದಿಲ್ಲ. ನಮ್ಮ ದೇಹ ಯಾಂತ್ರಿಕವಾಗಿ ಕೆಲಸ ಮಾಡುತ್ತಿರುತ್ತದೆ, ನಾವೆಲ್ಲೋ ಅಲೆದಾಡುತ್ತಿರುತ್ತೇವೆ. ಈ ಯಾಂತ್ರಿಕತೆ ಹೋಗಬೇಕು, ನಾವು ಪ್ರಜ್ಞಾಪೂರ್ವಕ ಜೀವನ ನಡೆಸಬೇಕು. ಇದು ನಮ್ಮನ್ನು ನಾವು ತಿದ್ದಿಕೊಳ್ಳಲು ಅತ್ಯಂತ ಆವಶ್ಯಕ ಹಾಗೂ ಇದರಿಂದ ನಮ್ಮ ಏಕಾಗ್ರತಾ ಶಕ್ತಿಯೂ ಅಧಿಕವಾಗುತ್ತದೆ.

## ೮. ಇತರರಲ್ಲಿ ತನ್ನನ್ನು ಕಾಣುವುದು (Empathy)

ನಮ್ಮ ವ್ಯಕ್ತಿತ್ವದ ಪರಿಧಿಯೊಳಗೇ ನಮ್ಮನ್ನು ನಾವು ಸೀಮಿತಗೊಳಿಸಿಕೊಳ್ಳದೆ ಇತರರ ಸುಖದುಃಖದೊಡನೆ ನಮ್ಮನ್ನು ಒಂದಾಗಿಸಿಕೊಳ್ಳಬೇಕು—**ಆತ್ಮವತ್ ಸರ್ವಭೂತೇಷು** ಎಂಬ ಭಾವವನ್ನು ಬೆಳೆಸಿಕೊಳ್ಳಬೇಕು. ನಮಗೆ ಯಾರಾದರೂ ವಂಚನೆ ಮಾಡಿದರೆ ಹೇಗೆ ನಮಗೆ ನೋವಾಗುತ್ತದೆಯೊ ಹಾಗೆಯೇ ಇತರರಿಗೂ ಕೂಡ. ಇತರರು ಏನಾದರೂ ಕೆಟ್ಟ ಮಾತನ್ನಾಡಿದಾಗ ನಮಗೆ ನೋವಾಗುತ್ತದೆ, ಆದರೆ ನಾವು ಬಿರುನುಡಿಯನ್ನು ನುಡಿದರೆ ಇತರರಿಗೂ ನೋವಾಗುತ್ತದೆ ಎಂದು ನಾವು ಭಾವಿಸುವುದೇ ಇಲ್ಲ. ಒಂದು ಸಂಸ್ಕೃತ ಶ್ಲೋಕವಿದೆ:

**ನ ತತ್ಪರಸ್ಯ ಸಂದಧ್ಯಾತ್ ಪ್ರತಿಕೂಲಂ ಯದಾತ್ಮನಃ |**

**ಏತದ್ಧರ್ಮಮಿತಿ ಪ್ರೋಕ್ತಂ ಕಾಮಾದನ್ಯತ್ಪ್ರವರ್ತತೇ ||**

'ಯಾವುದು ತನಗೆ ಪ್ರತಿಕೂಲ ಪರಿಣಾಮವನ್ನುಂಟು ಮಾಡುವುದೋ ಅದನ್ನು ಇತರರಿಗೂ ಮಾಡಬಾರದು. ಇದೇ ಧರ್ಮ, ಉಳಿದುದೆಲ್ಲ ಆಸೆಗಳಿಂದ ಪ್ರೇರಿತ.' ನಮ್ಮ ಸುಖ ದುಃಖಗಳನ್ನು ಇತರರಲ್ಲಿ ಕಾಣುವ ವೈಶಾಲ್ಯವನ್ನು ನಾವು ಬೆಳೆಸಿಕೊಳ್ಳಬೇಕು.

## ೯. ಭಾವೋದ್ವೇಗವನ್ನು ನಿಗ್ರಹಿಸುವುದು (Coping with emotions)

ಕೋಪ, ದ್ವೇಷ, ವ್ಯಾಮೋಹ ಇತ್ಯಾದಿ ಭಾವೋದ್ವೇಗಗಳಿಗೆ ವಶರಾಗಿ ನಾವು ಎಷ್ಟೋ ತಪ್ಪುಗಳನ್ನು ಮಾಡುತ್ತೇವೆ. ಇದರಿಂದ ನಮಗೂ ಹಾನಿ, ಇತರರಿಗೂ ಹಾನಿ. ಭಾವೋದ್ವೇಗಗಳು ನಮ್ಮ ಮನಶ್ಶಾಂತಿಯನ್ನೂ ದೇಹಾರೋಗ್ಯವನ್ನು ಕೆಡಿಸುತ್ತವೆ. ಆಂಗ್ಲ ಭಾಷೆಯಲ್ಲಿ ಒಂದು ಮಾತಿದೆ: 'Anger is the price we pay for somebody else's mistake' (ಕೋಪವು ನಾವು ಇತರರ ತಪ್ಪಿಗಾಗಿ ಅನುಭವಿಸುವ ಶಿಕ್ಷೆ.) ಯಾರೊ ಕೆಟ್ಟಮಾತನ್ನಾಡುವ ಒಂದು ತಪ್ಪನ್ನು ಮಾಡುತ್ತಾರೆ; ನಾವು ಅದರಿಂದ ಕೋಪಮಾಡಿಕೊಂಡು ನಮ್ಮ ಮನಶ್ಶಾಂತಿಯನ್ನೂ ದೇಹಾರೋಗ್ಯವನ್ನೂ ಕೆಡಿಸಿಕೊಳ್ಳುತ್ತೇವೆ. ಬುದ್ಧನು ಹೇಳಿದ ಒಂದು ಕಥೆ ಇಲ್ಲಿ ಬೋಧಪ್ರದವಾದುದು: ವಿಷಬಾಣದಿಂದ ಇರಿಯಲ್ಪಟ್ಟ ಒಬ್ಬ ವ್ಯಕ್ತಿಯು, 'ಅದನ್ನು ಬಿಟ್ಟವನು ಯಾರು, ಅದು ಯಾವುದರಿಂದ ಆದುದು ಮುಂತಾದ ವಿಷಯವನ್ನು ತಿಳಿಯದೆ ನಾನು ಅದನ್ನು ತೆಗೆಯಲು ಬಿಡುವುದಿಲ್ಲ' ಎಂದು ಹೇಳಿದರೆ ಅವನ ಪ್ರಾಣಹಾನಿಯಾಗುವುದು ನಿಶ್ಚಯ. ಹಾಗೆಯೆ ನಮಗಾರಾದರೂ ನೋವನ್ನುಂಟುಮಾಡಿದರೆ ಅವರನ್ನು ದ್ವೇಷಿಸುವುದರ ಬದಲು ಆ ನೋವಿನ ಕಾರಣವನ್ನು ನಮ್ಮೊಳಗೇ ಹುಡುಕಬೇಕು.

## ೧೦. ಒತ್ತಡವನ್ನು ಸಹಿಸಿಕೊಳ್ಳುವುದು (Coping with stress)

ಇಂದಿನ ಸಾಮಾಜಿಕ ಸ್ಥಿತಿ ಅತ್ಯಂತ ಸಂಕೀರ್ಣವಾದುದು. ಜೀವನ ಅತ್ಯಂತ ತ್ವರಿತ ಗತಿಯಲ್ಲಿ ಸಾಗುತ್ತಿದೆ. ಇದು ನಮ್ಮ ನರಮಂಡಲದ ಮೇಲೆ ಹೆಚ್ಚು ಒತ್ತಡವನ್ನು ಹೇರುತ್ತದೆ. ಆಫೀಸಿನಲ್ಲಿ ಕೆಲಸದ ಅಥವಾ ಕೆಲಸವೇ ಇಲ್ಲದಿರುವುದರ ಒತ್ತಡ, ಮನೆಯಲ್ಲಿ ಸಂಸಾರದ ಒತ್ತಡ, ಮಕ್ಕಳನ್ನು ಸರಿಯಾದ ಶಾಲೆಗೆ ಸೇರಿಸುವ ಒತ್ತಡ, ಮಾರ್ಕೆಟ್ಟಿನಲ್ಲಿ ಸಾಮಾನು ಕೊಂಡುಕೊಳ್ಳುವ ಒತ್ತಡ — ಹೀಗೆ ಅನೇಕ ಒತ್ತಡಗಳು ಮನುಷ್ಯನನ್ನು ಕಾಡಿಸುತ್ತವೆ. ಒಂದು ತಂತಿಯನ್ನು ಅತ್ಯಂತ ಬಿಗಿಯಾಗಿ ಕಟ್ಟಿದರೆ ಅದು ಮೆತ್ತಗೆ ಗಾಳಿಬೀಸಿದಾಗಲೂ ಸ್ಪಂದಿಸುತ್ತದೆ. ಹೀಗೆಯೇ ನಮ್ಮ ನರಮಂಡಲವೂ ಬಿಗಿಯಾಗಿದ್ದರೆ ಯಾವುದೇ ಸಣ್ಣ ಒತ್ತಡವನ್ನೂ ಸಹಿಸಿಕೊಳ್ಳಲಾರದ ಸ್ಥಿತಿಯಲ್ಲಿರುತ್ತದೆ. ಇದಕ್ಕೆ ಎಲ್ಲ ಪರಿಸ್ಥಿತಿಗಳನ್ನೂ ಹಗುರವಾಗಿ ತೆಗೆದುಕೊಳ್ಳುವ ಶಾಂತಮನಸ್ಕರಾಗಿರುವುದು ಆವಶ್ಯಕ. ಎಲ್ಲವೂ ನಮ್ಮ ನಿಯಂತ್ರಣದಲ್ಲಿಲ್ಲ ಎಂಬುದನ್ನು ಅರಿತು, ಅನಿವಾರ್ಯವಾದುದನ್ನು ಶಾಂತ ಮನಸ್ಸಿನಿಂದ ಸ್ವೀಕರಿಸುವ ಮನೋಭಾವವನ್ನು ಬೆಳೆಸಿಕೊಳ್ಳಬೇಕು.

—ಸಂ.

ವಿನೋದ ವಿಹಾರಗಳಿಗೆ ಒಂದು ನಿರ್ದಿಷ್ಟ ಸಮಯ ಸ್ಥಳಗಳಿರಬೇಕು. ಆದರೆ ಅವುಗಳಿಂದಾಗಿ ನಿಮ್ಮ ನಿಜವಾದ ಉದ್ದೇಶ ಮರೆಯುವಂತಾಗಬಾರದು. ನೀವು ಹಡಗಿನಲ್ಲಿ ಪಯಣಿಸುತ್ತಿರುವಿರಿ ಎಂದಿಟ್ಟುಕೊಳ್ಳಿ. ಹಡಗು ಒಂದು ಬಂದರಿನಲ್ಲಿ ಲಂಗರು ಹಾಕಿರುತ್ತದೆ. ನೀವಾಗ ಹಡಗಿನಿಂದಿಳಿದು ಸಮುದ್ರತೀರದಲ್ಲಿ ಓಡಾಡುವುದಕ್ಕೆ ಹೋಗಬಹುದು, ಆಕರ್ಷಕ ವಸ್ತುಗಳು ಅಥವಾ ದೃಶ್ಯಗಳು ನಿಮ್ಮ ಗಮನವನ್ನು ಸೆಳೆಯಬಹುದು. ಆದರೆ ಎಚ್ಚರಿಕೆಯಿಂದಿರಿ, ನಾವಿಕನ ಕರೆಯ ಕಡೆ ಯಾವಾಗಲೂ ಗಮನವಿರಲಿ. ಹಡಗಿನ ದೃಶ್ಯ ನಿಮ್ಮ ಮನಃಪಟಲದಿಂದ ಮರೆಯಾಗದಿರಲಿ. ಈ ಪ್ರಪಂಚದಲ್ಲಿ ಕ್ಷುದ್ರ ವಿಷಯಗಳಿಂದ ವಿಕ್ಷೇಪಗೊಳ್ಳುವುದು ಬಹಳ ಸುಲಭ. ನಾವಿಕನು ಕರೆದಾಗ ಮಾತ್ರ ಎಲ್ಲವನ್ನು ಬಿಟ್ಟು ಓಡಿ ಬರಬೇಕು —ಹಿಂತಿರುಗಿಯೂ ನೋಡಬಾರದು.

— ಎಪಿಕ್ಟೆಟಸ್

# ಜಿಪುಣರಾಗಬೇಡಿ

ನಾವು ಕಷ್ಟಪಟ್ಟು ಹಣವನ್ನೋ ವಸ್ತುವನ್ನೋ ಸಂಗ್ರಹಿಸುತ್ತೇವೆ. ಇದು ನನ್ನದು ಎಂದು ಭದ್ರವಾಗಿ ಇಟ್ಟುಕೊಳ್ಳುತ್ತೇವೆ. ಆದರೆ ಯಾವ ವಸ್ತುವೂ ಶಾಶ್ವತವಾಗಿ ನಮ್ಮದಲ್ಲ. ನಾವು ದೇಹವನ್ನು ಬಿಟ್ಟುಹೋಗುವಾಗ ಯಾವುದೂ ನಮ್ಮೊಡನೆ ಬರುವುದಿಲ್ಲ.

ಒಬ್ಬ ಶ್ರೀಮಂತನಿದ್ದ. ಅವನು ತುಂಬ ಜಿಪುಣ. ಒಂದು ಕಾಸನ್ನೂ ಬಿಚ್ಚುತ್ತಿರಲಿಲ್ಲ. ತುಂಬ ಹಣವನ್ನು ಸಂಗ್ರಹಿಸಿಟ್ಟುಕೊಂಡಿದ್ದ. ಪ್ರತಿದಿನ ಹಣದ ಪೆಟ್ಟಿಗೆಯ ಬೀಗ ತೆಗೆದು, ಹಣವನ್ನು ಎಣಿಸಿ ನೋಡುತ್ತಿದ್ದ. ಅದನ್ನು ಎಣಿಸುವುದೇ ಅವನಿಗೆ ದೊಡ್ಡ ಆನಂದ.

ಅವನಿಗೆ ವಯಸ್ಸಾಯಿತು. ಅನೇಕ ರೋಗಗಳು ಅವನನ್ನು ಕಾಡತೊಡಗಿದುವು. ಇನ್ನೇನು ಅವನು ಸಾಯುವ ಸ್ಥಿತಿಯಲ್ಲಿದ್ದಾನೆ. ಸುತ್ತಲೂ ಅವನ ಮಕ್ಕಳು ಸಂಬಂಧಿಕರು ನೆರೆದಿದ್ದಾರೆ. ಅವರೆಲ್ಲ ಕಣ್ಣೀರು ಸುರಿಸುತ್ತ ಅವನು ಸಾಯುವುದನ್ನೇ ನಿರೀಕ್ಷಿಸುತ್ತಿದ್ದರು. ವೈದ್ಯರೂ ಈ ಜಿಪುಣನಿಂದ ಹಣ ದೋಚುವುದು ಅಸಾಧ್ಯವೆಂದು ತಿಳಿದು ಅವನನ್ನು ಹೆಚ್ಚು ಕಾಲ ಜೀವಿಸಿರುವಂತೆ ಮಾಡಲು ಪ್ರಯತ್ನಿಸಲಿಲ್ಲ. ಸಾಯುವುದಕ್ಕೆ ಮುಂಚೆ ಅವನ ಬಾಯಿಗೆ ಗಂಗಾಜಲವನ್ನು ಬಿಡೋಣವೆಂದು ಮಗನು ಒಂದು ಬಟ್ಟಲಿನಲ್ಲಿ ಗಂಗಾಜಲವನ್ನು ತಂದನು. ಆದರೆ ಜಿಪುಣನು ಬಾಯಿಯನ್ನು ಗಟ್ಟಿಯಾಗಿ ಮುಚ್ಚಿಕೊಂಡಿದ್ದ. ಎಷ್ಟೇ ಪ್ರಯತ್ನಪಟ್ಟರೂ ತೆರೆಯಲೇ ಇಲ್ಲ. ಅವನ ಮುಖದ ಮೇಲೆಯೇ ಗಂಗಾಜಲವನ್ನು ಚಿಮುಕಿಸಿದನು.



ಕಲೆ : ರಾಮು ಗೌತಮ

ಜಿಪುಣ ಪ್ರಾಣಬಿಟ್ಟ. ಅವನ ಹೆಣವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಅಗ್ನಿಗೆ ಆಹುತಿಯಿತ್ತರು. ಮಕ್ಕಳು ಮನೆಗೆ ಬಂದು ಪೆಟ್ಟಿಗೆಯಲ್ಲಿ ಎಷ್ಟು ಹಣ ಇದೆ ಎಂದು ನೋಡಲು ಹೊರಟರು. ಆದರೆ ಎಷ್ಟೇ ಹುಡುಕಿದರೂ ಬೀಗದಕೈ ಸಿಗಲೇ ಇಲ್ಲ. ಮರುದಿನ ಆ ಜಿಪುಣನ ಅಸ್ಥಿಯನ್ನು ಸಂಗ್ರಹಿಸಲು ಸ್ಮಶಾನಕ್ಕೆ ಹೋದಾಗ ಬೂದಿಯ ಒಳಗೆ ಬೀಗದಕೈ ಸಿಕ್ಕಿತು. ಆಗ ಅವರಿಗೆ ಗೊತ್ತಾಯಿತು ಆ ಮನುಷ್ಯ ಗಂಗಾಜಲವನ್ನು ಬಿಡುವಾಗ ಏಕೆ ಬಾಯಿ ತೆರೆಯಲಿಲ್ಲ ಎಂದು. ಸಂಸ್ಕೃತದಲ್ಲಿ ಒಂದು ವಿಡಂಬನಾತ್ಮಕ ಶ್ಲೋಕವಿದೆ:

ಕೃಪಣೇನ ಸಮೋ ದಾತಾ ನ ಭೂತೋ ನ ಭವಿಷ್ಯತಿ।
ಅಸ್ಪೃಶನ್ ಏವ ವಿತ್ತಾನಿ ಯಃ ಪರೇಭ್ಯಃ ಪ್ರಯಚ್ಛತಿ॥

'ಜಿಪುಣನಿಗೆ ಸಮಾನನಾದ ದಾನಶೂರನು ಎಲ್ಲಿಯೂ ಯಾವ ಕಾಲದಲ್ಲಿಯೂ ದೊರೆಯನು. ತಾನು ಐಶ್ವರ್ಯವನ್ನು ಮುಟ್ಟದೆಯೇ ಇತರರಿಗೆ ಅದನ್ನು ಅವನು ನೀಡುತ್ತಾನೆ.' ■

# ಪುಸ್ತಕಪಾಂಡಿತ್ಯ ಯಾತಕ್ಕೂ ಬಾರದು.



ಕಲೆ : ರಾಮ ಗೌತಮ

ಅನೇಕ ಪುಸ್ತಕಗಳನ್ನು ಓದಿ ಪಾಂಡಿತ್ಯವನ್ನು ಪಡೆದರೆ ಯಾವ ಪ್ರಯೋಜನವೂ ಇಲ್ಲ. ನಾವು ಉತ್ತಮರಾಗುವುದು, ಉತ್ತಮ ಜೀವನ ನಡೆಸುವುದು ಮುಖ್ಯ. ಪಾಂಡಿತ್ಯ ಇದಕ್ಕೆ ಸಹಾಯ ಮಾಡಿದರೆ ಒಳ್ಳೆಯದು, ಇಲ್ಲದಿದ್ದರೆ ಅದಕ್ಕೆ ಯಾವ ಬೆಲೆಯೂ ಇಲ್ಲ. ಆಹಾರ ಪದಾರ್ಥಗಳನ್ನು ತಿನ್ನದೆ ಹಾಗೇ ಇಟ್ಟುಕೊಂಡರೆ ಏನು ಪ್ರಯೋಜನ? ಹಾಗೆಯೇ ಪಾಂಡಿತ್ಯವು ನಮ್ಮ ಬಾಳಿನ ಬೆಳವಣಿಗೆಗೆ ಸಹಾಯ ಮಾಡದಿದ್ದರೆ ಏನು ಪ್ರಯೋಜನ?

ಇಬ್ಬರು ಬ್ರಾಹ್ಮಣ ಪಂಡಿತರಿದ್ದರು. ಒಬ್ಬರು ದ್ವೈತ ಪಂಡಿತರು ಇನ್ನೊಬ್ಬರು ಅದ್ವೈತ ಪಂಡಿತರು. ಅವರವರಲ್ಲಿ ಯಾವಾಗಲೂ ವಾಗ್ವಾದ ನಡೆಯುತ್ತಿತ್ತು. ಒಮ್ಮೆ ಅವರು ಶ್ರಾದ್ಧದ ಊಟವನ್ನು ಮುಗಿಸಿಕೊಂಡು ತಮ್ಮ ಊರಕಡೆ ಹೊರಟಿದ್ದರು. ದಾರಿಯಲ್ಲಿ ಚರ್ಚೆ ಪ್ರಾರಂಭವಾಯಿತು. ಅದು ಬಿಸಿಯೇರತೊಡಗಿತು. ಅವರಿಗೆ ಕತ್ತಲೆಯಾದದ್ದು ಗೊತ್ತೇ ಆಗಲಿಲ್ಲ. ಅವರು ದಟ್ಟ ಅಡವಿಯಲ್ಲಿ ಹೋಗುತ್ತಿದ್ದಾರೆ. ಆಗ ದೂರದಲ್ಲಿ ಒಂದು ಹುಲಿ ಕಾಣಿಸಿತು. ಅವರ ಚರ್ಚೆ ಎಲ್ಲೋ ಹಾರಿಹೋಯಿತು. ಅವರು ಓಡತೊಡಗಿದರು. ಹುಲಿಯು ಅವರನ್ನು ಹಿಂಬಾಲಿಸಿತು. ಅದರಿಂದ ತಪ್ಪಿಸಿಕೊಳ್ಳಲು ಅವರು ಒಂದು ಮರವನ್ನು ಹತ್ತಿದರು. ಆ ಮರ ಅವರಿಬ್ಬರ ಭಾರವನ್ನು ಹೊರುವಷ್ಟು ದೊಡ್ಡದಾಗಿತ್ತು. ಈಗ ಹುಲಿ ಬಂದು ಅವರು ಕೆಳಗಿಳಿದು ಬರುವುದನ್ನೇ ಕಾಯುತ್ತ ಮರದ ಕೆಳಗೆ ಕುಳಿತುಕೊಂಡಿತು. ಅದು ಅಲ್ಲಿಂದ ಕದಲುವ ಸೂಚನೆ ಕಂಡುಬರಲಿಲ್ಲ. ಒಬ್ಬ ಪಂಡಿತ ಈಗೇನು ಮಾಡುವುದೆಂದು ಆಲೋಚಿಸತೊಡಗಿದ.

'ಇನ್ನೊಬ್ಬ ಪಂಡಿತನನ್ನು ಕೆಳಗೆ ತಳ್ಳಿಬಿಟ್ಟರೆ, ಹುಲಿ ಅವನನ್ನು ತೆಗೆದುಕೊಂಡು ಹೋಗುತ್ತದೆ. ಆಗ ನಾನು ತಪ್ಪಿಸಿಕೊಂಡು ಹೋಗಬಹುದು' ಎಂದು ಚಿಂತಿಸಿದ. ಇದೇ ಆಲೋಚನೆ ಇನ್ನೊಬ್ಬ ಪಂಡಿತನಲ್ಲೂ ಬಂತು. ಸರಿ, ಈಗ ಇಬ್ಬರೂ ಪರಸ್ಪರರನ್ನು ತಳ್ಳತೊಡಗಿದರು. ಸಮತೋಲ ತಪ್ಪಿ ಇಬ್ಬರೂ ಕೆಳಗೆ ಬಿದ್ದರು. ಹುಲಿಗೆ ನಿಜವಾದ 'ಬ್ರಾಹ್ಮಣ ಭೋಜನ'ವಾಯಿತು.

ಗ್ರಂಥಗಳನ್ನು ಓದಿ ಅದರ ಸಾರವನ್ನು ಮೈಗೂಡಿಸಿಕೊಳ್ಳಬೇಕು. ಸಂಸ್ಕೃತದಲ್ಲಿ ಒಂದು ಶ್ಲೋಕವಿದೆ:

ಗ್ರಂಥಾನಭ್ಯಸ್ಯ ಮೇಧಾವೀ ಜ್ಞಾನವಿಜ್ಞಾನತತ್ಪರಃ |
ಪಲಾಲಮಿವ ಧಾನ್ಯಾರ್ಥೀ ತ್ಯಜೇತ್ಸರ್ವಮಶೇಷತಃ ||

'ಜ್ಞಾನವನ್ನೂ ಅನುಭವವನ್ನೂ ಬಯಸುವ ಬುದ್ಧಿಶಾಲಿಯು ಗ್ರಂಥಗಳನ್ನು ಅಧ್ಯಯನ ಮಾಡಿ, ಅದರ ಸಾರವನ್ನು ಗ್ರಹಿಸಿಕೊಂಡು, ಧಾನ್ಯವನ್ನು ಬಯಸುವವನು ಹೊಟ್ಟನ್ನು ಬಿಸಾಕುವಂತೆ ಗ್ರಂಥಗಳನ್ನು ತ್ಯಜಿಸಬೇಕು.' ■

ಶ್ರೀರಾಮಕೃಷ್ಣರು ಹೇಳಿದ ಕಥೆ.

# ಗಣೇಶ ಮತ್ತು ಕಾರ್ತಿಕೇಯ



ವಿಘ್ನರಾಜನು ಕಾರ್ತಿಕೇಯನು
ತಾಯ ಬಳಿ ಕುಳಿತಿದ್ದರು
ತನ್ನ ಕತ್ತಿನ ಹಾರ ಮುತ್ತಿನ
ನಿಮಗೆ ನೀಡುವೆನೆಂದಳು ‖ ೧ ‖

'ಯಾರು ಭುವನವ ಸುತ್ತಿ ಬರುವರು
ಮೊದಲಿಗಾತನೆ ಪಡೆಯುವ'
ಎಂದ ಕೂಡಲೆ ಮಗನು ಷಣ್ಮುಗ
ನವಿಲನೇರುತ ಧುಮುಕಿದ ‖ ೨ ‖

ಸಿದ್ಧಿ ಬುದ್ಧಿಯ ವಿಘ್ನರಾಜನು
ಇಲಿ ಸವಾರಿಯ ಮಾಡುತ
ಅಮ್ಮ ಭಗವತಿಯನ್ನು ಸುತ್ತಿದ
ತಾಯ ಮಡಿಲಿಗೆ ನಮಿಸಿದ ‖ ೩ ‖

ಮಾತೆಯೊಳಗಡೆ ಭುವನವಿರುವುದ
ಅರಿತ ಗಣಪನು ಗೆದ್ದನು
ಒಲಿದ ಮಾತೆಯು ಮಗನ ಕೊರಳಿಗೆ
ಹಾರ ಪ್ರೇಮದಿ ಇಟ್ಟಳು ‖ ೪ ‖

ಕರ್ಮಯೋಗಿಯು ಓಡಿ ಬಂದನು
ಸಕಲ ಭುವನವ ಸುತ್ತುತ
ಜ್ಞಾನಿ ಗಣಪತಿ ಗೆದ್ದ ಹಾರವ
ಕಂಡನರಿತನು ಮಾತೆಯ ‖ ೫ ‖

ಪದ್ಯಾನುವಾದ : ಡಾ. ಮಡ್ವ ಶಾಮ ಭಟ್ಟ
ಕಲೆ : ಪುರುಷೋತ್ತಮ ಕಾರಂತ

## ವಾರ್ತಾ ವಿಶ್ಲೇಷಣೆ

### ಧರ್ಮ: ನಮ್ಮ ಸ್ವಭಾವ

ಧಾರ್ಮಿಕ ಮತ್ತು ಆಧ್ಯಾತ್ಮಿಕ ನಂಬಿಕೆ ಮಾನವನ ಸ್ವಭಾವದಲ್ಲಿಯೇ ಇದೆ ಎಂದೆನಿಸುತ್ತದೆ. ಪ್ರಪಂಚದ ಎಲ್ಲ ಜನಾಂಗಗಳಲ್ಲೂ, ಅತ್ಯಂತ ಪುರಾತನ ಕಾಲದಿಂದಲೂ, ಒಂದಲ್ಲ ಒಂದು ಬಗೆಯ ಧಾರ್ಮಿಕ ನಂಬಿಕೆಯನ್ನು ಕಾಣುತ್ತೇವೆ. ಎಷ್ಟೇ ಸಾಮಾಜಿಕ ಮತ್ತು ರಾಜಕೀಯ ಒತ್ತಡಗಳಿದ್ದರೂ, ಅದು ಕೆಲವು ಕಾಲ ಸುಪ್ತಾವಸ್ಥೆಯಲ್ಲಿ ಉಳಿದರೂ ಮತ್ತೆ ಅದು ತಲೆ ಎತ್ತುವುದನ್ನು ನೋಡುತ್ತೇವೆ. ಮಿದುಳಿನಲ್ಲಿ ದೇವರಿಗೆ ಸಂಬಂಧಪಟ್ಟ ಒಂದು ಕೇಂದ್ರ(God module)ವಿದೆಯೆಂದು ವಿಜ್ಞಾನಿಗಳು ಹೇಳುತ್ತಾರೆ. ಈ ಕೇಂದ್ರವೇ ಧಾರ್ಮಿಕ ನಂಬಿಕೆಗೆ ಕಾರಣವೆಂಬುದು ಅವರ ಅಭಿಮತ. ಹೀಗೆ ಧಾರ್ಮಿಕ ನಂಬಿಕೆಯೆಂಬುದು ಮನುಷ್ಯ ಸ್ವಭಾವದ ಒಂದು ಅಂಗವಾಗಿರುವುದರಿಂದ ಅದನ್ನು ನಿರ್ಮೂಲ ಗೊಳಿಸಲು ಆಗುವುದಿಲ್ಲವೆಂದು ಕಂಡುಬರುತ್ತದೆ.

ಇತ್ತೀಚೆಗೆ ಚೀನಾದಲ್ಲಿ ನಡೆದ ಸಂಗತಿಯೂ ಇದನ್ನೇ ಸಮರ್ಥಿಸುತ್ತದೆ. ಧರ್ಮಕ್ಕೆ ವಿರೋಧಿಯಾದ ಅಲ್ಲಿಯ ಕಮ್ಯುನಿಸ್ಟ್ ಸರ್ಕಾರವು ಧಾರ್ಮಿಕ ನಂಬಿಕೆಯನ್ನು ಮನುಷ್ಯನಂತರಾಳದಿಂದ ತೊಡೆದು ಹಾಕಲು ಶತಪ್ರಯತ್ನ ಮಾಡುತ್ತಿದೆ. ಫಲುನ್ ಗಾಂಗ್ (Falun Gong) ಧಾರ್ಮಿಕ ಪಂಗಡವು ಅಲ್ಲಿ ಹುಟ್ಟಿಕೊಂಡು, ಇಂತಹ ವಿರುದ್ಧ ವಾತಾವರಣದಲ್ಲಿಯೂ ಹುಟ್ಟಿದ ಏಳೇ ವರ್ಷಗಳಲ್ಲಿ ಹತ್ತು ಕೋಟಿ ಅನುಯಾಯಿಗಳನ್ನು ಅದು ಪಡೆಯಿತು. ಅದರ ನಾಯಕ ಲಿ ಹೊಂಗಜಿ ವಿದೇಶದಲ್ಲಿರುವನು. ಅವರ ಸಾಧನಾ ವಿಧಾನದ ಹೆಸರು ಕ್ವಿಗಾಂಗ್. ಇದೊಂದು ಸರಳವಾದ ಉಸಿರಾಟದ ವಿಧಾನ. ಇದರಿಂದ ಮನಶ್ಶಾಂತಿ ಆನಂದ ಉಂಟಾಗುತ್ತದೆಯಲ್ಲದೆ ದೈಹಿಕ ಆರೋಗ್ಯವೂ ಉತ್ತಮಗೊಳ್ಳುತ್ತದೆಯಂತೆ. ಇದು ಹಣವೇ ಪ್ರಧಾನವಾದ ಭೌತಿಕ ಸಂಸ್ಕೃತಿಯ ಅತಿರೇಕದಿಂದ ದೂರ ವಿರುವುದಕ್ಕೆ ಸಹಾಯ ಮಾಡುತ್ತದೆ.

ಕಮ್ಯುನಿಸ್ಟ್ ಸರ್ಕಾರವು ಈಗ ಈ ಚಳುವಳಿಯನ್ನು ಹತ್ತಿಕ್ಕುತ್ತಿದೆ. ಸರ್ಕಾರ ಈ ಚಳುವಳಿಗೆ ಬಹಿಷ್ಕಾರ ಹಾಕಿ, ಅದಕ್ಕೆ ಸಂಬಂಧಪಟ್ಟ ಲಕ್ಷಗಟ್ಟಲೆ ಪುಸ್ತಕಗಳು ಮತ್ತು ಕ್ಯಾಸೆಟ್ಟುಗಳನ್ನು ಧ್ವಂಸಮಾಡಿತು ಮತ್ತು ಸಾವಿರಾರು ಅನುಯಾಯಿಗಳನ್ನು ಸೆರೆಹಿಡಿದು ಅವರ ಮನಃಪರಿವರ್ತನೆಗೆ ಬೇರೆ ಕಡೆ ಕಳಿಸಿತು. ಈ ಚಳುವಳಿ ದೇಶಕ್ಕೆ ದೊಡ್ಡ ಆತಂಕಪ್ರಾಯವೆಂದು ಸರ್ಕಾರ ಪರಿಗಣಿಸುತ್ತಿದೆ.

### ಕುಟುಂಬಜೀವನದ ಪ್ರಾಮುಖ್ಯ

ಅಮೆರಿಕದಲ್ಲಿ ಜಾನ್ ಎಫ್. ಕೆನಡಿ ತೀರಿಕೊಂಡಾಗ ಬಹುತೇಕ ಅಮೇರಿಕನ್ನರು ವೈಯಕ್ತಿಕ ನಷ್ಟವನ್ನು ಅನುಭವಿಸಿದರು. ಭಾರತದಲ್ಲಿಯೂ ಎಂ.ಜಿ. ರಾಮಚಂದ್ರನ್ ತೀರಿಕೊಂಡಾಗಲೂ ಲಕ್ಷಾಂತರ ಜನರು ಕಣ್ಣೀರು ಸುರಿಸಿದರು. ತಮ್ಮ ಹತ್ತಿರದ ಸಂಬಂಧಿಕರು ತೀರಿಕೊಂಡಾಗಲೂ ಇಷ್ಟೊಂದು ದುಃಖಕ್ಕೊಳಗಾಗದ ಜನರು ಯಾರೊ ಪ್ರಮುಖ ವ್ಯಕ್ತಿಗಳು ತೀರಿಕೊಂಡಾಗ ಈ ರೀತಿ ನಷ್ಟವನ್ನು ಅನುಭವಿಸುವುದಕ್ಕೆ ಕಾರಣವೇನು — ಎಂದು ಕೇಳುತ್ತಾರೆ ಮೈಕೇಲ್ ಲೆಮೊನಿಕ್,ಟೈಮ್ (TIME) ಪತ್ರಿಕೆಯಲ್ಲಿ. ಇಂದಿನ ವಿಜ್ಞಾನ ಮತ್ತು ತಾಂತ್ರಿಕತೆಯ ಪರಿಣಾಮವಾಗಿ ಹಾಗೂ ವಾಣಿಜ್ಯ ಮನೋಭಾವದ ಪ್ರಭಾವದಿಂದಾಗಿ ಕೌಟುಂಬಿಕ ಸಂಬಂಧ ಸಡಿಲವಾಗುತ್ತಿವೆ. ಕುಟುಂಬಗಳು ಒಡೆದು ಹೋಗುತ್ತಿವೆ, ಪರಸ್ಪರ ಪ್ರೀತಿ ಬಾಂಧವ್ಯ ನಶಿಸಿಹೋಗುತ್ತಿದೆ. ತಮ್ಮ ಹತ್ತಿರದವರ ಸಂಬಂಧ ಇಲ್ಲದಿರುವುದರಿಂದ ಯಾವುದೊ ಪ್ರಸಿದ್ಧವ್ಯಕ್ತಿಯೊಡನೆ ತಮ್ಮನ್ನು ಸಂಬಂಧಿಸಿಕೊಳ್ಳುವ ಪ್ರವೃತ್ತಿ ಹೆಚ್ಚುತ್ತಿದೆಯೆಂದು ಲೆಮೊನಿಕ್ ಅಭಿಪ್ರಾಯ ಪಡುತ್ತಾರೆ.

ಕಲೆತು ಬಾಳುವುದು ಆರೋಗ್ಯಕರ ಜೀವನಕ್ಕೆ, ಮಾನಸಿಕ ಸ್ವಾಸ್ಥ್ಯಕ್ಕೆ ಆವಶ್ಯಕ. ಡ್ಯೂಕ್ ವಿಶ್ವವಿದ್ಯಾಲಯದ ಸಂಶೋಧಕರ ವರದಿಯ ಪ್ರಕಾರ ಸಾಪ್ತಾಹಿಕ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ವೃದ್ಧರು ಹೆಚ್ಚು ಕಾಲ ಬದುಕುತ್ತಾರೆ, ಇದಕ್ಕೆ ಕಾರಣ ಅವರಿಗೆ ಸಿಕ್ಕುವ ಸಾಮಾಜಿಕ ಬೆಂಬಲ. ವಿಶಾಲ ಸಮಾಜದೊಡನೆ ತಮ್ಮನ್ನು ಒಂದಾಗಿಸಿಕೊಳ್ಳುವುದರಿಂದ ಮಾನಸಿಕ ಕುಸಿತದಿಂದ ಅವರು ಪಾರಾಗುತ್ತಾರೆ. ಭಾರತದಲ್ಲಿಯೂ ಇತ್ತೀಚೆಗೆ ಪೂಜೆ, ಹೋಮ, ಧಾರ್ಮಿಕ ಉತ್ಸವಗಳು, ದೇವಸ್ಥಾನಗಳು — ಮುಂತಾದ ಸಾಮೂಹಿಕ ಧಾರ್ಮಿಕತೆಯು ಹೆಚ್ಚು ಜನಪ್ರಿಯ ವಾಗುತ್ತಿರುವುದಕ್ಕೆ ನಶಿಸಿಹೋಗುತ್ತಿರುವ ಕೌಟುಂಬಿಕ ಮೌಲ್ಯಗಳೇ ಕಾರಣವಿರಬಹುದು. ತಮ್ಮ ಮನೆಯಲ್ಲಿ ಸಿಗದ ಭಾವನಾತ್ಮಕ ಬೆಂಬಲವನ್ನು ಸಾಮೂಹಿಕ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಪಡೆಯಲು ಅವರು ಪ್ರಯತ್ನಿಸುತ್ತಾರೆ. ಆದರೆ ಇದು ಕೌಟುಂಬಿಕ ಮೌಲ್ಯದ ಸ್ಥಾನವನ್ನು ತುಂಬಲಾರದು. ದುರಂತದ ಸಮಯದಲ್ಲಿ ಕುಟುಂಬವೊಂದೇ ನಿಜವಾದ ಆಶ್ರಯ. ಆಗ ಕೆನಡಿಯಾಗಲಿ, ರಾಮಚಂದ್ರನ್ ಆಗಲಿ, ಸಾಮೂಹಿಕ ಧರ್ಮವಾಗಲಿ ನಮಗೆ ಸಮಾಧಾನ ನೀಡಲು ಬರುವುದಿಲ್ಲ.



# ಪುಸ್ತಕ ಪರಿಚಯ

**SWAMI VIVEKANANDA BIBLIOGRAPHY**
ಸಂಕಲನ: ಡಾ.ಪ್ರಭುಶಂಕರ
ಪ್ರಕಾಶಕರು: ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು – ೫೭೦ ೦೦೬
ಪುಟಗಳು: ೧೭೬, ಬೆಲೆ: ೩೦೦/-

ಸ್ವಾಮಿ ವಿವೇಕಾನಂದರ ವ್ಯಕ್ತಿತ್ವ ಮೇರೆ ಇಲ್ಲದ ಕಡಲಿನಂತೆ ಇರುವುದು. ಅವರ ಭಾಷಣಗಳು, ಬರಹಗಳು ಮತ್ತು ಅವರ ಬಗ್ಗೆ ಕಳೆದ ಹಲವಾರು ವರ್ಷಗಳಿಂದ ಹೊರಬಂದಿರುವ ಬರಹಗಳು, ಜೀವನಗ್ರಂಥಗಳು, ಸಂಶೋಧನಾ ಕೃತಿಗಳು ನೂರಾರು. ಹತ್ತು ಹಲವು ಕಡೆ ಹಂಚಿಹೋಗಿರುವ ಈ ವಿಶಾಲ ಸಾಹಿತ್ಯದ ವ್ಯವಸ್ಥಿತ ಅಧ್ಯಯನ ಸಾಧ್ಯವಾಗುವುದು, ಸಮರ್ಪಕವಾದ ಸೂಚಿಯಿಂದ ಮಾತ್ರ. ಆದರೆ ಅದನ್ನು ಸಿದ್ಧಪಡಿಸುವುದು ಬಹಳ ಕಷ್ಟ. ವಿದ್ವತ್ತಿನ ಜೊತೆಗೆ ಕಠಿಣ ಪರಿಶ್ರಮ ಹಾಗೂ ವಿಶ್ಲೇಷಣಾತ್ಮಕ ಬುದ್ಧಿ ಇದಕ್ಕೆ ಆವಶ್ಯಕ. ಇಂತಹ ಗುಣಗಳನ್ನು ಮೈಗೂಡಿಸಿಕೊಂಡವರು ಕನ್ನಡದ ಹಿರಿಯ ಸಾಹಿತಿ ಮತ್ತು ಸ್ವಾಮೀಜಿಯವರ ಕೃತಿಗಳ ಆಳ ಅಧ್ಯಯನ ಮಾಡಿದ ಧುರೀಣ ಡಾ.ಪ್ರಭುಶಂಕರ ಅವರು. ಅವರು ಸಂಪಾದಿಸಿರುವ SWAMI VIVEK ANANDA BIBLIOGRAPHY ವಿವೇಕಾನಂದ ಅಧ್ಯಯನ ಕ್ಷೇತ್ರದಲ್ಲಿ ಒಂದು ಮೈಲುಗಲ್ಲಾಗಿದೆ.

ಮೈಸೂರು ವಿಶ್ವವಿದ್ಯಾನಿಲಯದವರು ೧೯೭೬ರಲ್ಲಿ ಸ್ಥಾಪಿಸಿದ 'ವಿವೇಕಾನಂದ ಪೀಠ'ವನ್ನು ಪ್ರಥಮ ಬಾರಿಗೆ ಅಲಂಕರಿಸಿದ ಶ್ರೀಪ್ರಭುಶಂಕರ, ದೇಶದ ಹಲವಾರು ಗ್ರಂಥಾಲಯಗಳಿಗೆ ಭೇಟಿ ಕೊಟ್ಟು, ಆಕರಗಳನ್ನು ಸಂಗ್ರಹಿಸಿ, ಈ ಸೂಚಿಯನ್ನು ಸಂಪಾದಿಸಿದ್ದಾರೆ. ಇದರಲ್ಲಿ ಮೂರು ಭಾಗಗಳಿವೆ. ಪ್ರತಿಯೊಂದು ಭಾಗದಲ್ಲಿಯೂ ವಿಶೇಷಪದ ಅಥವಾ ವಿಷಯಗಳನ್ನು ವರ್ಣಾನುಕ್ರಮವಾಗಿ ಜೋಡಿಸಲಾಗಿದೆ. ಪ್ರತಿಯೊಂದಕ್ಕೂ, ಅದು ಬರುವ ಆಕರಗಳ ವಿವರಗಳನ್ನು ಕೊಡಲಾಗಿದೆ.

ಭಾಗ — ೧ರಲ್ಲಿ ೪೧೬ ವಿಶೇಷಪದ ಹಾಗೂ ವಿಷಯಗಳಿದ್ದು, ಪ್ರತಿಯಂದಕ್ಕೂ ಅವು ಕಾಣಬರುವ ಪುಸ್ತಕಗಳ ಸೂಚಿಯನ್ನು ಕೊಡಲಾಗಿದೆ. ಹಾಗೆಯೇ, ೨ನೆಯ ಭಾಗದಲ್ಲಿ ೩೬೫ ಪದ/ವಿಷಯಗಳಿಗೆ ಗ್ರಂಥಭಾಗಗಳು ಮತ್ತು ಸ್ಮರಣ ಸಂಚಿಕೆಗಳ ಸೂಚಿಯನ್ನೂ, ೩ನೆಯ ಭಾಗದಲ್ಲಿ ೨೧೩ ಪದ/ವಿಷಯಗಳಿಗೆ ನಿಯತಕಾಲಿಕೆಗಳ ಪಟ್ಟಿಯನ್ನೂ ಕೊಡಲಾಗಿದೆ. ಪ್ರತಿ ಭಾಗದಲ್ಲಿಯೂ, ಲೇಖಕರ ಮತ್ತು ವಿಶೇಷಪದ/ವಿಷಯಗಳ ಅನುಕ್ರಮಣಿಕೆ ಇದೆ.

ಸ್ವಾಮಿ ವಿವೇಕಾನಂದರ ಬಗ್ಗೆ ಅಧ್ಯಯನ ಅಥವಾ ಸಂಶೋಧನೆ ಮಾಡಬಯಸುವ ಆಸಕ್ತರಿಗೆಲ್ಲಾ ಇದು ಸಂಗ್ರಹಯೋಗ್ಯವಾಗಿರುವ ಗ್ರಂಥ. ಒಂದೇ ಕೊರತೆಯೆಂದರೆ, ಇಂಗ್ಲೀಷಿನಲ್ಲಿ ಪ್ರಕಟವಾಗಿರುವ ಸಾಹಿತ್ಯಕ್ಕೆ ಮಾತ್ರ ಈ ಸಂಕಲನ ಸೀಮಿತವಾಗಿರುವುದು.

ದೊಡ್ಡ ಆಕಾರದಲ್ಲಿ ಭವ್ಯವಾಗಿ ಮೂಡಿಬಂದಿರುವ ಈ ಪುಸ್ತಕ 'ಪ್ರಸಾರಾಂಗ'ದ ಒಂದು ಮಹತ್ವದ ಕಾಣಿಕೆಯಾಗಿದೆ.

— ಬ್ರ. ವಿವಿಕ್ತ ಚೈತನ್ಯ

**ಶ್ರೀ ಗೋಸ್ವಾಮಿ ತುಳಸೀದಾಸರ ಶ್ರೀರಾಮಚರಿತಮಾನಸ**
**(ಮಕರಂದ ಎಂಬ ಕನ್ನಡ ವ್ಯಾಖ್ಯಾನದೊಡನೆ)**
**೧೦ ಸಂಪುಟಗಳಲ್ಲಿ**
ವ್ಯಾಖ್ಯಾನಕಾರರು: ಡಾ. ಎಂ.ಕೆ. ಭಾರತೀರಮಣಾಚಾರ್ಯ
ಪ್ರಕಾಶಕರು:ಶ್ರುತಿ ಪ್ರಕಾಶನ 266/8,ಮೂರನೇ ಮುಖ್ಯರಸ್ತೆ
ಹನುಮಂತನಗರ ಬೆಂಗಳೂರು-೫೬೦ ೦೧೯

ಉತ್ತರಭಾರತದಲ್ಲಿ 'ರಾಮಾಯಣ'ವೆಂದರೆ, ಎಲ್ಲರ ಮನಸ್ಸಿಗೆ ಬರುವುದು ಶ್ರೀಗೋಸ್ವಾಮಿ ತುಳಸೀದಾಸರ ಶ್ರೀರಾಮಚರಿತ ಮಾನಸವೇ. ಅಲ್ಲಿನ ಕೋಟ್ಯಂತರ ಜನರು, ಕಳೆದ ೪೦೦ ವರ್ಷಗಳಿಂದ ರಾಮಕಥೆಯ ಸುಧಾಪಾನವನ್ನು ಸವಿದು ಧನ್ಯರಾಗುತ್ತಿರುವುದು ಈ ಪವಿತ್ರಗ್ರಂಥದ ಮೂಲಕವೇ. ಅಷ್ಟೊಂದು ಸುದೀರ್ಘ ಕಾಲಮಾನದಲ್ಲಿ, ವಿಶಾಲ ಜನಸಮುದಾಯವೊಂದರ ಸಂಸ್ಕೃತಿ, ಧರ್ಮ, ಆಚರಣೆ ಮತ್ತು ಸಾಹಿತ್ಯಗಳ ಮೇಲೆ ಗಾಢಪರಿಣಾಮ ಬೀರಿದ ಬೇರೊಂದು ಗ್ರಂಥ ಜಗತ್ತಿನ ಸಾಹಿತ್ಯಕ್ಷೇತ್ರದಲ್ಲಿ ಕಾಣಸಿಗದು.

ಮಾನಸವು ರಚಿತವಾಗಿರುವುದು ಹಿಂದಿಯ ಒಂದು ಉಪಭಾಷೆಯಾದ ಅವಧಿಯಲ್ಲಿ. ಇದನ್ನು ತುಳಸೀದಾಸರು ದೋಹಾ ಚವುಪಾ ಶೈಲಿಯಲ್ಲಿ ಬರೆದಿದ್ದಾರೆ. ಇದು ಸಂಸ್ಕೃತದ ಆಧ್ಯಾತ್ಮಿಕ ರಾಮಾಯಣವನ್ನು ಆಧಾರವಾಗಿ ಇಟ್ಟುಕೊಂಡಿದ್ದಾದರೂ, ಶ್ರೀ ತುಳಸೀದಾಸರ ರಾಮಭಕ್ತಿಯ ಭಾವಲಹರಿಯ ಮೇರು ಔನ್ನತ್ಯದ ಪರಾಕಾಷ್ಠೆಯನ್ನು ನಾವಿಲ್ಲಿ ಕಾಣಬಹುದಾಗಿದೆ, ಭಕ್ತಿಜಲದಲ್ಲಿ ಮಿಂದು ಧನ್ಯರಾಗಬಹುದಾಗಿದೆ.

ಇಂತಹ ಉದ್ಗ್ರಂಥದ ಕನ್ನಡ ವ್ಯಾಖ್ಯಾನವನ್ನು ಹತ್ತು ಬೃಹತ್ ಸಂಪುಟಗಳಲ್ಲಿ ಹಲವಾರು ವರ್ಷಗಳ ಕಠಿಣ ಪರಿಶ್ರಮದಿಂದ ಸಂಪನ್ನಗೊಳಿಸಿ, ಕನ್ನಡ ಜನತೆಯ ಮುಂದಿಟ್ಟಿದ್ದಾರೆ ಡಾ. ಎಂ.ಕೆ. ಭಾರತೀರಮಣಾಚಾರ್ಯರು. ಬನಾರಸ್ ಹಿಂದೂ ವಿಶ್ವ—

ವಿದ್ಯಾನಿಲಯದಲ್ಲಿ ಸ್ನಾತಕೋತ್ತರ ಪದವಿ ಪಡೆದ ಇವರು, ಹಿಂದೀ ಭಾಷೆಯಲ್ಲಿ ಅಗಾಧ ಪಾಂಡಿತ್ಯವುಳ್ಳವರಾಗಿದ್ದಾರೆ. ಕರ್ನಾಟಕದಲ್ಲಿ, ತಮ್ಮ ಇಡೀ ಜೀವನವನ್ನೇ ತುಳಸೀರಾಮಾಯಣದ ಅಧ್ಯಯನ-ಪ್ರವಚನಗಳಲ್ಲಿ ಕಳೆದ ಆಚಾರ್ಯರ ವಿದ್ವತ್ ತಪಸ್ಸಿನ ಫಲವೇ ಮಕರಂಧವೆಂಬ ಈ ಸುದೀರ್ಘ ವ್ಯಾಖ್ಯಾನ.

ರಾಮಚರಿತಮಾನಸದ ಪ್ರತಿಯೊಂದು ಪದವನ್ನೂ, ಸಾಹಿತ್ಯಿಕವಾಗಿ, ತಾತ್ತ್ವಿಕವಾಗಿ ಮತ್ತು ಧಾರ್ಮಿಕವಾಗಿ ವಿಶ್ಲೇಷಿಸುವುದರ ಮೂಲಕ, ಕಾವ್ಯದ ಅಂತಃಸತ್ತ್ವವನ್ನು ಸ್ಫುಟಗೊಳಿಸುವ ಮಹಾನ್ ಕಾರ್ಯದಲ್ಲಿ ಆಚಾರ್ಯರು ಯಶಸ್ವಿಯಾಗಿದ್ದಾರೆ. ಪುಸ್ತಕದಲ್ಲಿ ಹಾರೈಕೆಕಾರರೊಬ್ಬರು ಬರೆದಿರುವಂತೆ, ಉತ್ತರ ಭಾರತದ ಪ್ರಖ್ಯಾತ ರಾಮಚರಿತಮಾನಸದಂತಹ ಜ್ಞಾನಗಂಗೆಯನ್ನು ದಕ್ಷಿಣಭಾರತಕ್ಕೆ, ವಿಶೇಷವಾಗಿ ಕನ್ನಡಕ್ಕೆ ಸಮರ್ಥವಾಗಿ, ಸಮಗ್ರವಾಗಿ ತಂದಿರುವ ಭಗೀರಥ ಪ್ರಯತ್ನ ಇದು.

— ಬ್ರ. ವಿವಿಕ್ತ ಚೈತನ್ಯ

**ಸಿದ್ಧಾಂತ ಶಿಖಾಮಣಿ**
**ಪೂಜ್ಯ ಶ್ರೀ ಮಲ್ಲಿಕಾರ್ಜುನ ಶಿವಯೋಗಿಗಳ ಪ್ರವಚನ ಸಾರಸಂಗ್ರಹ**

ಲೇಖಕರು : ಶ್ರೀ ಸಿದ್ಧೇಶ್ವರ ಸ್ವಾಮಿಗಳು.
ಪ್ರಕಾಶಕರು : ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ
ರಾಮಾನುಜ ರಸ್ತೆ, ಮೈಸೂರು ೫೭೦ ೦೦೪
ಪುಟ: ೮೭೯ +xvi, ಬೆಲೆ: ರೂ. ೧೫೦

ವೀರಶೈವ ಸಿದ್ಧಾಂತದ ಒಂದು ಮಹತ್ತ್ವಪೂರ್ಣವಾದ ಸಂಸ್ಕೃತ ಶಾಸ್ತ್ರಗ್ರಂಥ ಶ್ರೀ ಶಿವಯೋಗಿ ಶಿವಾಚಾರ್ಯ ವಿರಚಿತ ವೀರಶೈವ ಸಿದ್ಧಾಂತ ಶಿಖಾಮಣಿ. ಈ ಗ್ರಂಥ ಕನ್ನಡದಲ್ಲಿ ಬೆಳಕು ಕಂಡದ್ದು ಸುಮಾರು ಎರಡು ದಶಕಗಳಿಗಿಂತ ಹಿಂದೆ. ಬಿಜಾಪುರದ ಪೂಜ್ಯ ಲಿಂಗೈಕ್ಯ ಶ್ರೀಮಲ್ಲಿಕಾರ್ಜುನ ಸ್ವಾಮಿಗಳು ಕೊಲ್ಹಾಪುರದಲ್ಲಿ ಈ ಗ್ರಂಥವನ್ನು ಕುರಿತು ನೀಡಿದ ಪ್ರವಚನಗಳ ಸಾರವನ್ನು ಸಂಗ್ರಹಿಸಿದವರು, ಪೂಜ್ಯ ಸ್ವಾಮೀಜಿಯವರ ಆಧ್ಯಾತ್ಮಿಕ ಮಾರ್ಗದರ್ಶನದಲ್ಲೇ ಸಾಧನೆಗೈದು ಸಾರ್ಥಕತೆಯನ್ನು ಪಡೆದಿರುವ ಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳು. ತಮ್ಮ ಬದುಕು, ಚಿಂತನ, ಪ್ರವಚನಗಳಿಂದ ಅಸಂಖ್ಯ ಅಧ್ಯಾತ್ಮ ಸಾಧಕರಿಗೆ ಸ್ಫೂರ್ತಿಯಾಗಿರುವ ಶ್ರೀ ಸಿದ್ಧೇಶ್ವರ ಸ್ವಾಮಿಗಳು ಸಾಧಕವೃಂದದಲ್ಲಿ ಚಿರಪರಿಚಿತರು.

ಪ್ರಸ್ತುತ ಕೃತಿಯಲ್ಲಿ ವೀರಶೈವ ಸಿದ್ಧಾಂತದ ಅಡಿಗಲ್ಲಾದ ಷಟ್‌ಸ್ಥಲ ದರ್ಶನವನ್ನು ವಿಸ್ತೃತವಾಗಿ ಚರ್ಚಿಸಲಾಗಿದೆ. ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲಗಳು ಹೇಗೆ ತಾತ್ತ್ವಿಕವಾದ ಒಂದು ಮತ ಸಿದ್ಧಾಂತವೋ ಹಾಗೆಯೇ ಒಂದು ಉಪಾಸನಾ ಮಾರ್ಗವೂ ಹೌದು. ವೀರಶೈವದ ಮುಖ್ಯಗುರಿ ಲಿಂಗಾಂಗ ಸಾಮರಸ್ಯ. ಶಕ್ತಿ-ವಿಶಿಷ್ಟ ಪರಶಿವನ ಸತ್-ಚಿತ್-ಆನಂದರೂಪರಾದ ಗುರು, ಲಿಂಗ, ಜಂಗಮರೇ ವೀರಶೈವ ಉಪಾಸನಾಮಾರ್ಗದಲ್ಲಿ ಉಪಾಸ್ಯಮೂರ್ತಿಗಳು. ಈ ಉಪಾಸನೆಯ ವಿವರಣೆಗಳು ನಮಗೆ ಮನೋಜ್ಞವಾಗಿ ದೊರೆಯುವುದು ಶಿವಶರಣರ ವಚನ ವಾಙ್ಮಯದಲ್ಲಿ. ಜೀವನದ ಅಂತಿಮ ಸಾಧನೆಗೆ ತಮ್ಮ ಬಾಳನ್ನೇ ಮುಡಿಪಾಗಿಟ್ಟ ಮಹಾನುಭಾವರಾದ ಶಿವಶರಣರ ವಚನಗಳನ್ನು ವಿಪುಲವಾಗಿ ಪ್ರಮಾಣವಾಗಿ ಉದ್ಧರಿಸಿರುವ ಈ ಕೃತಿಯಲ್ಲಿ ಶುಷ್ಕ ಸಿದ್ಧಾಂತಗಳಿಗಿಂತ ಭಿನ್ನವಾದ, ಬದುಕಿಗೆ ಹತ್ತಿರವಾದ ಒಂದು ಜೀವನ-ದರ್ಶನವನ್ನು ನಾವು ಕಾಣುತ್ತೇವೆ.

ಅನುಭಾವಿ ಚಿಂತಕರಾದ ಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮೀಜಿಯವರ ಒಳನೋಟಗಳು ಸಾಧಕರ ಹೃದಯದಲ್ಲಿ ಈ ಗ್ರಂಥವನ್ನು ಶಾಶ್ವತವಾಗಿ ಪ್ರತಿಷ್ಠಾಪಿಸುವಂತೆ ಮಾಡುತ್ತವೆ. ಆಧ್ಯಾತ್ಮಿಕ ಮಾರ್ಗದ ಸಾಧಕರಿಗೆ ಅಗತ್ಯವಾದ ಮಾರ್ಗದರ್ಶನ ಈ ಗ್ರಂಥದಲ್ಲಿದೆ.

ಗ್ರಂಥದ ಪಾರಾಯಣಕ್ಕೆ ಅನುಕೂಲವಾಗುವಂತೆ ಸುಂದರವಾದ ವಿನ್ಯಾಸದಲ್ಲಿರುವ ಪ್ರಸಕ್ತ ಮುದ್ರಣದ ಅನುಬಂಧದಲ್ಲಿ ಮೂಲಶ್ಲೋಕಗಳ ಅಕಾರಾದಿ ಸೂಚಿ, ಪದ ಸೂಚಿ, ಹಾಗೂ ವ್ಯಾಖ್ಯಾನದಲ್ಲಿ ಉದ್ಧೃತವಾಗಿರುವ ವಚನಗಳ ಅಕಾರಾದಿ ಸೂಚಿಯೂ ಇದೆ.

ಸತ್ಯ-ತತ್ತ್ವಗಳಿಂದ ಹಿರಿದಾದ ಈ ಗ್ರಂಥದ ಅಧ್ಯಯನ-ಅಧ್ಯಾಪನ ಚಿತ್ತ-ಮನ-ಭಾವ-ಬುದ್ಧಿಗಳಿಗೆ ಸಂಸ್ಕಾರವನ್ನೊದಗಿಸುವ ಜೊತೆಗೆ ಆತ್ಮವಿಕಸನಕ್ಕೂ ಪ್ರೇರಣೆ ನೀಡಬಲ್ಲವು. ಇಂತಹ ಮೌಲಿಕ ಆಧ್ಯಾತ್ಮಿಕ ಗ್ರಂಥ ಕನ್ನಡ ಬಲ್ಲ ಎಲ್ಲ ಸಾಧಕರೂ ಸಂಗ್ರಹಿಸಲೇ ಬೇಕಾದ ಅಮೂಲ್ಯ ನಿಧಿ.

— ವಿಜಯಕುಮಾರ

## ಬಲ್ಲವರದಾರು?

ಏನಿಲ್ಲ! ಏನಿಲ್ಲವೆಂಬುದೂ ಅಲ್ಲಿಲ್ಲ!
ಏನದೆಂಬುದನರಿವರಾರೊಬ್ಬರೂ ಇಲ್ಲ!
ಕರಿದಿಲ್ಲ: ಬಿಳಿದಿಲ್ಲ; ದಿನವಿಲ್ಲ; ನಿಶೆಯಿಲ್ಲ
ಅರಿವಿಲ್ಲ; ಮನವಿಲ್ಲ; ಅಳಿವಿಲ್ಲ; ಉಳಿವಿಲ್ಲ;
ಶೂನ್ಯಮಲ್ಲವು! ಸರ್ವವೂ 'ನೇತಿ' 'ನೇತಿ'!
ಕಾಲದೇಶಗಳಿಲ್ಲ! ಸಾವು ಬಾಳುಗಳಿಲ್ಲ!
ನಾನಿಲ್ಲ; ನೀನಿಲ್ಲ ; ಸರ್ವವೂ, ಮೌನ!
ತಿಮಿರ ಬೆಳಕಿನೊಳಡಗಿ, ಬೆಳಕು ತಿಮಿರದೊಳವಿತು,
ಭಾವ ಶೂನ್ಯವ ಸೇರಿದುದು ಐಕ್ಯಮಾಗಿ!
ರವಿಯಿಲ್ಲ; ಶಶಿಯಿಲ್ಲ; ನಭವಿಲ್ಲ; ಧರೆಯಿಲ್ಲ;
ರಂಜಿಸುವ ಉಡುಗಣದ ಸೌಂದರ್ಯವಿಲ್ಲ!
ತುದಿಯಿಲ್ಲ; ಮೊದಲಿಲ್ಲ; ಒಂದಿಲ್ಲ; ಎರಡಿಲ್ಲ;
ಏನು ಏನಾಗಿರ್ಪುದೋ ಬಲ್ಲವರದಾರು?
ಭಾವದೊಳಭಾವವೋ? ಶೂನ್ಯದೊಳಶೂನ್ಯವೋ?
ಅರಿವಿನಾಚೆಯ ತೀರ ಬರಿಮೌನ, ಮೌನ!
ಜ್ಞಾನತಾನಲ್ಲಿಲ್ಲ; ಜ್ಞೇಯಮದುಮಿಲ್ಲ;
ಜ್ಞಾನಜ್ಞೇಯಗಳೆಲ್ಲ ಜ್ಞಾತನೊಳು ಸೇರೆ
ಏನು ಏನಾಗಿರ್ಪುದೋ ಬಲ್ಲವರದಾರು?

ಮೂಲ: ಸ್ವಾಮಿ ವಿವೇಕಾನಂದ, ಅನುವಾದ : ಕುವೆಂಪು

## ಸುದ್ದಿ ಸಂಚಯ

# ಲಕ್ನೋದಲ್ಲಿ ಶ್ರೀರಾಮಕೃಷ್ಣ ದೇವಾಲಯದ ಉದ್ಘಾಟನಾ ಸಮಾರಂಭ



ಆಧ್ಯಾತ್ಮಿಕ ಕ್ಷೇತ್ರದ ನಂದನವನವೇ ಆಗಿರುವ ಈ ದೇಶದಲ್ಲಿ ವಿಶೇಷ ಆಕರ್ಷಣೆಯ ಕೇಂದ್ರಗಳೆಂದರೆ ಇಲ್ಲಿನ ದೇವಾಲಯಗಳು. ಇತ್ತೀಚೆಗೆ ಉತ್ತರ ಪ್ರದೇಶದ ಲಕ್ನೋದಲ್ಲಿ ಶಿಲ್ಪಕಲೆಯ ಸೋಜಿಗವೆಂಬಂತೆ ನಿರ್ಮಿಸಲಾಗಿರುವ ಶ್ರೀ ರಾಮಕೃಷ್ಣ ದೇವಾಲಯದ ಉದ್ಘಾಟನಾ ಸಮಾರಂಭವನ್ನು ಅತ್ಯಂತ ಸಂಭ್ರಮದಿಂದ ನೆರವೇರಿಸಲಾಯಿತು. ಹದಿಮೂರು ವರ್ಷಗಳಷ್ಟು ದೀರ್ಘ ಅವಧಿಯಲ್ಲಿ ಈ ದೇವಾಲಯವು ಈ ದೇಶದ ಖ್ಯಾತ ಶಿಲ್ಪಶಾಸ್ತ್ರಜ್ಞರ ನೇತೃತ್ವದಲ್ಲಿ, ಐ.ಐ.ಟಿ ಕಾನ್ಪುರದ ಶಿಲ್ಪಶಾಸ್ತ್ರಜ್ಞರ ತಂಡದ ಪರಿಶ್ರಮದಿಂದ ನಿರ್ಮಾಣವಾಗಿದೆ. ಭಾರತೀಯ ವಾಸ್ತುಶಿಲ್ಪದ ಪರಂಪರೆಯ ವೈಶಿಷ್ಟ್ಯವನ್ನು ಅತ್ಯಾಧುನಿಕ ಶಿಲ್ಪತಾಂತ್ರಿಕತೆಯೊಂದಿಗೆ ಮೇಳೈಸುವ ಒಂದು ಅಪೂರ್ವ ಪ್ರಯತ್ನ ಈ ದೇವಾಲಯದಲ್ಲಿ ಸಾಕಾರಗೊಂಡಿದೆ.

ಈ ದೇವಾಲಯದ ಉದ್ಘಾಟನಾ ಸಮಾರಂಭವು ನವಂಬರ್ ೧೭ರಂದು ಮೊದಲ್ಗೊಂಡು ಮೂರು ದಿನಗಳ ಕಾಲ ರಾಮಕೃಷ್ಣ ಮಠ ಮತ್ತು ಮಿಶನ್ನಿನ ಅಧ್ಯಕ್ಷರಾದ ಪರಮ ಪೂಜ್ಯ ಶ್ರೀಮತ್ ಸ್ವಾಮಿ ರಂಗನಾಥಾನಂದಜೀಯವರ ದಿವ್ಯ ಸನ್ನಿಧಿಯಲ್ಲಿ ಜರುಗಿತು. ದೇಶದ ವಿವಿಧ ಭಾಗಗಳಿಂದಲೇ ಅಲ್ಲದೆ ವಿದೇಶಗಳಿಂದಲೂ ಭಕ್ತರ ಮಹಾಪೂರವೇ ಬಂದು ಸೇರಿತ್ತು. ಆ ದಿನ ಮುಂಜಾನೆ ೭.೩೦ರಿಂದ ಮೆರವಣಿಗೆಯಿಂದ ಪ್ರಾರಂಭಗೊಂಡ ಕಾರ್ಯಕ್ರಮದಲ್ಲಿ ದುರ್ಗಾ ಸಪ್ತಶತೀ ಹೋಮ, ಹವನ, ವಿಶೇಷ ಪೂಜೆಗಳಲ್ಲಿ ಸುಮಾರು ೧೫,೦೦೦ಕ್ಕೂ ಹೆಚ್ಚು ಭಕ್ತರು ಪಾಲ್ಗೊಂಡಿದ್ದರು. ರಾಮಕೃಷ್ಣಾಶ್ರಮದ ಸಂನ್ಯಾಸಿಗಳು ಹಾಗೂ ವೃಂದದವರಿಂದ ಏರ್ಪಡಿಸಲಾಗಿದ್ದ ಭಜನೆ ಮತ್ತು ಸಂಗೀತ ಕಾರ್ಯಕ್ರಮ ಭಕ್ತರ ಹೃನ್ಮನಗಳಿಗೆ ಮುದ ನೀಡಿದವು.

ಕಾರ್ಯಕ್ರಮದ ಎರಡನೇ ದಿನ ಸಂಜೆಯ ಸಮಾವೇಶದಲ್ಲಿ ಆಗಮಿಸಿದ್ದ ಗುಜರಾತಿನ ಮಾಜಿ ರಾಜ್ಯಪಾಲ ಪದ್ಮಭೂಷಣ ಆರ್.ಕೆ. ತ್ರಿವೇದಿಯವರು ಮಾತನಾಡುತ್ತಾ ಜನತೆಯನ್ನು ಪ್ರಾಪಂಚಿಕತೆಯಿಂದ ವಿಮುಖರನ್ನಾಗಿಸಿ ಆಧ್ಯಾತ್ಮಿಕತೆಯ ಹಸಿವನ್ನು ತಣಿಸಲು ಮೈತಳೆದಂತಿದೆ ಈ ದೇವಸ್ಥಾನ ಎಂದರು. ಆ ಬೃಹತ್ ಭಕ್ತಸಮಾವೇಶವನ್ನುದ್ದೇಶಿಸಿ ಪರಮ ಪೂಜ್ಯ ಸ್ವಾಮಿ ರಂಗನಾಥಾನಂದಜೀಯವರು, ಶ್ರೀರಾಮಕೃಷ್ಣರ ದೇವಾಲಯವೆಂದರೆ ವೇದಾಂತದ ಸಾರ್ವತ್ರಿಕತೆಯ ಸಂದೇಶವನ್ನು ಜಗತ್ತಿಗೆ ಸಾರುತ್ತಿರುವ ಜೀವಂತ ಸ್ಮಾರಕ ಎಂದು ನುಡಿದರು. ರಾಮಕೃಷ್ಣ ಮಠ ಮತ್ತು ಮಿಶನ್ನಿನ ಉಪಾಧ್ಯಕ್ಷರಾದ ಪರಮ ಪೂಜ್ಯ ಸ್ವಾಮಿ ಆತ್ಮಸ್ಥಾನಂದಜೀಯವರು ಮಾತನಾಡುತ್ತಾ ಈ ದೇವಾಲಯದ ವೈಭವ ಈ ನಗರದ ಐತಿಹಾಸಿಕ ವೈಭವಕ್ಕೆ ಸಾಟಿಯಾಗಿದೆ ಎಂದರು. ಆ ದಿನ ಸಂಜೆ ದೇವಾಲಯದಲ್ಲಿ ಆರತಿಯ ನಂತರ ಸುಪ್ರಸಿದ್ಧ ಗಾಯಕರಾದ ಪಂಡಿತ್ ಜಸ್‌ರಾಜ್ ಅವರಿಂದ ಅಮೋಘವಾದ ಶಾಸ್ತ್ರೀಯ ಗಾಯನದ ಕಾರ್ಯಕ್ರಮವಿತ್ತು.

ಈ ದೇವಸ್ಥಾನದ ನಿರ್ಮಾಣದಲ್ಲಿ ಪಾಲ್ಗೊಂಡಿದ್ದ ಸಿಬ್ಬಂದಿಯನ್ನು ಅಭಿನಂದಿಸುವ ಕಾರ್ಯಕ್ರಮವನ್ನು ಕೊನೆಯ ದಿನ ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮದ ಅಂತ್ಯದಲ್ಲಿ ಹೈದರಾಬಾದಿನ ಕಲಾಕೃಷ್ಣ ಮತ್ತು ತಂಡದವರಿಂದ ಶಿವತಾಂಡವ ಮತ್ತು ರಾಮಕೃಷ್ಣ ಲೀಲಾಗೀತೆಯ ಡ್ಯಾನ್ಸ್ ಬ್ಯಾಲೆಯನ್ನು ಆಯೋಜಿಸಲಾಗಿತ್ತು.

ಪಾಲ್ಗೊಂಡಿದ್ದವರೆಲ್ಲರಿಗೂ ಬಹಳ ಕಾಲ ಮಾಸದೆ ಉಳಿಯುವ ಅಪೂರ್ವ ಅನುಭವವನ್ನು ನೀಡಿದ ವಿಶೇಷ ಸಂದರ್ಭ ಆದಾಗಿತ್ತು. ◆

## ವ್ಯಕ್ತಿತ್ವ ನಿರ್ಮಾಣ ಶಿಬಿರ

ಇಂದಿನ ಯುವಕರಿಗೆ ಸೂಕ್ತ ಮಾರ್ಗದರ್ಶನದ ಅವಶ್ಯಕತೆ ಬಹಳವಿದೆ. ಸರಿಯಾದ ರೀತಿಯಲ್ಲಿ ಅವರು ತಮ್ಮ ವ್ಯಕ್ತಿತ್ವವನ್ನು ಬೆಳಸಿಕೊಳ್ಳಲು ಹಿರಿಯರು ಸಹಾಯ ಮಾಡಬೇಕಾಗಿದೆ.

ಈ ಅವಶ್ಯಕತೆಯನ್ನು ಮನಸ್ಸಿನಲ್ಲಿಟ್ಟುಕೊಂಡು ದೆಹಲಿಯ ಇಂಡಿಯ ಕ್ವಾಲಿಟಿ ಫೌಂಡೇಶನ್(I.Q.F) ಮತ್ತು ಮೈಸೂರಿನ ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಸಂಸ್ಥೆಯವರು N.I.I.Tಯ ಸಹಕಾರದೊಂದಿಗೆ ವ್ಯಕ್ತಿತ್ವ ನಿರ್ಮಾಣಕ್ಕೆ ಸಂಬಂಧಿಸಿದ ಒಂದು ಸಿ.ಡಿ.(CD)ಯನ್ನು ಸಿದ್ಧಪಡಿಸಿರುತ್ತಾರೆ. ಇದು ಮುಖ್ಯವಾಗಿ ಸ್ವಾಮಿ ವಿವೇಕಾನಂದರ ಭಾವನೆಗಳನ್ನು ಆಧರಿಸಿದೆ. ವ್ಯಕ್ತಿತ್ವ ನಿರ್ಮಾಣಕ್ಕೆ ಸಂಬಂಧಿಸಿದ ಮುಖ್ಯ ಅಂಶಗಳಲ್ಲದೆ ಯುವಕರಲ್ಲಿ ಉದ್ಭವಿಸುವ ಪ್ರಶ್ನೆಗಳಿಗೆ ಉತ್ತರ, ಧ್ಯಾನ ಮತ್ತು ಯೋಗಾಸನಗಳನ್ನು ಕುರಿತ ಮಾರ್ಗದರ್ಶನ ಮತ್ತು ಓದಬೇಕಾದ ಪುಸ್ತಕಗಳನ್ನು ಕುರಿತ ಸಲಹೆ ಇತ್ಯಾದಿಗಳನ್ನು ಅದು ಒಳಗೊಂಡಿದೆ.

ಪ್ರಾರಂಭದಲ್ಲಿ ಶಾಲೆಗಳಲ್ಲಿ ಉನ್ನತ ವರ್ಗದ ವಿದ್ಯಾರ್ಥಿಗಳಿಗಾಗಿ ಈ ಕಾರ್ಯಕ್ರಮವನ್ನು ನಡೆಸಲಾಗುವುದು. ಬೇರೆ ವಿದ್ಯಾರ್ಥಿಗಳ ಪ್ರಯೋಜನಕ್ಕಾಗಿ ಶಾಲೆಗಳಲ್ಲಿ ವ್ಯಕ್ತಿತ್ವ ನಿರ್ಮಾಣದ ಒಂದು ವಿಭಾಗವನ್ನೇ ಪ್ರಾರಂಭಿಸಲಾಗುವುದು. ಮುಂದೆ ಕಾಲಕ್ರಮೇಣ, ಯುವಕರೆಲ್ಲರ ಪ್ರಯೋಜನಕ್ಕಾಗಿ ಈ ಕಾರ್ಯಕ್ರಮವನ್ನು ವೆಬ್‌ಸೈಟ್‌ಗೆ ಹಾಕಲಾಗುತ್ತದೆ. ಕನ್ನಡ ಭಾಷೆಯಲ್ಲಿಯೂ ಇದನ್ನು ಸಿದ್ಧಪಡಿಸಲಾಗುತ್ತದೆ. ಸ್ಲೈಡ್ ಷೋ ಮೂಲಕವೂ ಇದರ ಪ್ರಯೋಜನವನ್ನು ಪಡೆಯುವ ವ್ಯವಸ್ಥೆ ಮಾಡಲಾಗುತ್ತದೆ.

೧೯೯೦, ಅಕ್ಟೋಬರ್‌ನಲ್ಲಿ ದೆಹಲಿಯ ಮೂರು ಶಾಲೆಗಳಲ್ಲಿ ಇದರ ಪ್ರಾಯೋಗಿಕ ಕಾರ್ಯಕ್ರಮವನ್ನು ನಡೆಸಲಾಯಿತು. ಆ ಅನುಭವದ ಹಿನ್ನೆಲೆಯಲ್ಲಿ ಈ ಕಾರ್ಯಕ್ರಮವನ್ನು ಇನ್ನೂ ಹೆಚ್ಚು ಪರಿಷ್ಕರಿಸಲಾಗಿದೆ.

ಈಗ ಹೊಸ ಸಹಸ್ರಮಾನದಲ್ಲಿ ಮೈಸೂರಿನ ಶಾಲೆಗಳಲ್ಲಿ ಈ ಕಾರ್ಯಕ್ರಮವನ್ನು ನಡೆಸಲು ಸಿದ್ಧತೆಗಳು ನಡೆಯುತ್ತಿವೆ. ಇದಕ್ಕೆ ಸಂಬಂಧಿಸಿದಂತೆ ಮೈಸೂರಿನ ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಸಂಸ್ಥೆಯಲ್ಲಿ ಡಿಸೆಂಬರ್ ೧೯ ಮತ್ತು ೨೦ರಂದು ಒಂದು ಕಾರ್ಯಾಗಾರವನ್ನು ನಡೆಸಲಾಯಿತು. ರಾಮಕೃಷ್ಣ ಮಹಾಸಂಘದ ವಿವಿಧ ಕೇಂದ್ರಗಳಿಂದ ಅನೇಕ ಸಂನ್ಯಾಸಿಗಳು, ಬೇರೆ ಬೇರೆ ಯುವಕ ಸಂಘದ ಪ್ರತಿನಿಧಿಗಳು, ವಿವಿಧ ಶಾಲೆಕಾಲೇಜುಗಳ ಪ್ರಾಂಶುಪಾಲರು ಮತ್ತು ಉಪಾಧ್ಯಾಯರು ಅದರಲ್ಲಿ ಭಾಗವಹಿಸಿದ್ದರು.

ಬಹಳಷ್ಟು ಚರ್ಚೆಯ ನಂತರ ಈ ಕಾರ್ಯಕ್ರಮಕ್ಕೆ ಒಂದು ಅಂತಿಮ ರೂಪವನ್ನು ನೀಡಲಾಗಿದೆ. ಇದರ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಸಂಸ್ಥೆಯಲ್ಲಿ ಒಂದು ಕೇಂದ್ರ ಕಛೇರಿಯನ್ನು ತೆರೆಯಲಾಗಿದೆ. ◆

## ಒರಿಸ್ಸಾದಲ್ಲಿ ಪರಿಹಾರ ಕಾರ್ಯ

ಚಂಡಮಾರುತದಿಂದ ತತ್ತರಿಸಲ್ಪಟ್ಟ ಒರಿಸ್ಸಾದ ಪುರೀ ಜಿಲ್ಲೆ ಹಾಗೂ ಇತರ ಪ್ರದೇಶಗಳಲ್ಲಿನ ಸಂತ್ರಸ್ತರಿಗೆ ರಾಮಕೃಷ್ಣಮಿಶನ್ನಿನ ವತಿಯಿಂದ ಕೈಗೊಂಡ ಪರಿಹಾರ ಕಾರ್ಯ ಮುಂದುವರಿಯುತ್ತಿದೆ.

ಸಂತ್ರಸ್ತರಿಗೆ ಕುಡಿಯುವ ನೀರು, ಆಹಾರದ ಪ್ಯಾಕೆಟ್‌ಗಳು, ಸಕ್ಕರೆ, ಅಕ್ಕಿ ಮೊದಲಾದ ದಿನಸಿಗಳನ್ನು ಪರದೀಪ್ ಪ್ರದೇಶದ ಹತ್ತಿರ ಧಿಯಾಸಹಿ ಹಾಗೂ ಡಂಕ ಕೇಂದ್ರಗಳಿಂದ ವಿತರಣೆ ಮಾಡಲಾಯಿತು. ತೀವ್ರವಾಗಿ ವಿಧ್ವಂಸಗೊಂಡ ಸಮುದ್ರ ತೀರದ ೨೫ ಹಳ್ಳಿಗಳಲ್ಲಿ ೩,೦೦೦ಕ್ಕೂ ಹೆಚ್ಚು ಸಂತ್ರಸ್ತ ಕುಟುಂಬಗಳನ್ನು ಮೊದಲನೆ ಹಂತದ ಸಮೀಕ್ಷೆಯಲ್ಲಿ ಗುರುತಿಸಿ ಪ್ರಾಥಮಿಕ ಪರಿಹಾರ ಕಾರ್ಯವನ್ನು ಕೈಗೊಳ್ಳಲಾಯಿತು. ಸಂಚಾರ ವೈದ್ಯಕೀಯ ಘಟಕದ ನುರಿತ ವೈದ್ಯರುಗಳ ಮತ್ತು ಸಹಾಯಕರ ನೆರವಿನಿಂದ ಔಷಧಿ ವಿತರಣೆ ಕಾರ್ಯವನ್ನು ನಡೆಸಲಾಯಿತು.

ಸಮೀಕ್ಷೆಯ ಕಾರ್ಯವನ್ನು ಕೇಂದ್ರಪಾರ ಎಂಬ ಜಿಲ್ಲೆಗೆ ವಿಸ್ತರಿಸಲಾಯಿತು. ಅಲ್ಲಿ ೫೦೦ ಸಂತ್ರಸ್ತ ಕುಟುಂಬಗಳನ್ನು ಮೊದಲನೆ ಹಂತದಲ್ಲಿ ಗುರುತಿಸಿ ಅವರಿಗೆ ಆಹಾರದ ದಿನಸಿಗಳು, ವಸ್ತ್ರಗಳು, ಹೊದೆಯುವ ಕಂಬಳಿಗಳು ಮುಂತಾದ ದಿನನಿತ್ಯ ಬಳಕೆಯ ವಸ್ತುಗಳನ್ನು ಒದಗಿಸಲಾಯಿತು. ಸಮೀಕ್ಷೆಯ ಕಾರ್ಯವನ್ನು ಇತರೆ ಜಿಲ್ಲೆಗಳಿಗೂ ವಿಸ್ತರಿಸಲಾಗಿದೆ. ◆

ಆಟದ ಹಣ್ಣು ಅಥವಾ ಆನೆ, ನಿಜವಾದ ಹಣ್ಣಿನ ಅಥವಾ ಆನೆಯ
ನೆನಪನ್ನು ತರುವಂತೆಯೇ ಪೂಜೆಮಾಡುವ ವಿಗ್ರಹಗಳು
ನಿರಾಕಾರವಾದ ಸನಾತನವಾದ ದೇವರನ್ನು ನೆನಪಿಗೆ ತರುವುವು.



ನೀರಿನ ಮೇಲೆ ದೋಣಿಯಿರಬಹುದು. ಆದರೆ ದೋಣಿಯೊಳಗೆ
ನೀರು ಇರಕೂಡದು. ಸಾಧಕ ಪ್ರಪಂಚದಲ್ಲಿರಬಹುದು, ಆದರೆ
ಪ್ರಾಪಂಚಿಕತೆ ಅವನಲ್ಲಿರಕೂಡದು.



ಉತ್ತರಮುಖಿ ಯಾವಾಗಲೂ ಉತ್ತರವನ್ನೇ ತೋರುತ್ತದೆ.
ಆದಕಾರಣ ಹಡಗುಗಳು ದಾರಿಯನ್ನು ತಪ್ಪುವುದಿಲ್ಲ. ಮನುಷ್ಯನ
ಮನಸ್ಸು ಎಲ್ಲಿಯವರೆಗೂ ದೇವರಮೇಲೆ ನಿಂತಿರುತ್ತದೆಯೋ
ಅಲ್ಲಿಯವರೆಗೆ ಅವನು ಸಂಸಾರ ಸಾಗರದಲ್ಲಿ ದಾರಿತಪ್ಪುವುದಿಲ್ಲ.

*ಶ್ರೀರಾಮಕೃಷ್ಣ*



**Managing Editor: Swami Atmavidananda** **Editor: Swami Nityasthananda**
Printed and Published by Swami Atmavidananda, for Sri Ramakrishna Ashrama, Yadavagiri, Mysore - 570 020
Printed at **Pattabi Enterprises,** Ramavilas Road, Mysore.

VIVEKA PRABHA (KANNADA MONTHLY)
Registered with Registrar of Newspapers of India under 72356/2000.
Postal Regn. No. SK/Tech/ 4-14/8. Licensed to post without prepayment.

ಭರತಖಂಡ ಉತ್ಕರ್ಷವಾಗುವುದು - ದಂಷ್ಟ್ರನಖಗಳ ಶಕ್ತಿಯಿಂದಲ್ಲ,
ಆತ್ಮಶಕ್ತಿಯಿಂದ. ಅದರ ಧ್ವಜ ವಿನಾಶಸೂಚಕವಲ್ಲ, ಶಾಂತಿಯನ್ನು
ಪ್ರೀತಿಯನ್ನು ಸೂಚಿಸುವ ಗೈರಿಕವಸನವೆ ಅದರ ಲಾಂಛನ...
ಒಂದು ದೃಶ್ಯ ಮಾತ್ರ ಹಗಲಿನಂತೆ ಸ್ಪಷ್ಟವಾಗಿ ನನ್ನ ಕಣ್ಣ ಮುಂದೆ
ಕಾಣುತ್ತಿದೆ - ಈ ಪುರಾತನಮಾತೆ ಪುನಃ ಜಾಗ್ರತಳಾಗಿರುವಳು,
ತನ್ನ ಸಿಂಹಾಸನದ ಮೇಲೆ ಮಂಡಿಸಿರುವಳು. ಎಂದಿಗಿಂತ ಹೆಚ್ಚು
ಶೋಭಾಯಮಾನಳಾಗಿರುವಳು. ಆ ಮಹಾತಾಯಿಯ ಸಂದೇಶವನ್ನು
ಜಗತ್ತಿಗೆಲ್ಲ ಶಾಂತಿಯ ಧ್ವನಿಯಿಂದ ಆಶೀರ್ವಾದವಾಣಿಯಲ್ಲಿ ಸಾರಿ.

ಸ್ವಾಮಿ ವಿವೇಕಾನಂದ